KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಡಿಸೆಂಬರ್ ೩೧, ೨೦೦೯ (ಪುಷ್ಯ ೧೦, ಶಕ ವರ್ಷ ೧೯೩೧) | ಸಂಚಿಕೆ ೫೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಅವರಿಗೆ ವಾಹನ ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ ಕಸಂವಾಪ್ರ 83 ಕರಅ 2008, ದಿನಾಂಕ 11.11.2008

2. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 53 ಶಿಸನೇ 2009, ದಿನಾಂಕ 20.06.2009

3. ರಿಜಿಸ್ಟ್ರಾರ್, ಕುವೆಂಪು ಭಾಷಾ ಭಾರತಿ ಅವರ ಪತ್ರ ಸಂಖ್ಯೆ:ಕುಭಾಪ್ರಾ/23/ವಾಹನ/2009–10, ದಿನಾಂಕ 07.07.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 11.11.2008ರ ಸರ್ಕಾರಿ ಅಧಿಸೂಚನೆಯಲ್ಲಿ ಡಾ. ಪ್ರಧಾನ್ ಗುರುದತ್ತ ಅವರನ್ನು ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 20.06.2009ರ ಸರ್ಕಾರಿ ಅಧಿಸೂಚನೆ ಪ್ರಕಾರ ಡಾ. ಪ್ರಧಾನ್ ಗುರುದತ್ತ ಅವರಿಗೆ ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅಧ್ಯಕ್ಷರಾಗಿ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 07.07.2009ರ ಪತ್ರದಲ್ಲಿ ರಿಜಿಸ್ಟ್ರಾರ್, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಇವರು ಡಾ. ಪ್ರಧಾನ್ ಗುರುದತ್ತ ಅವರು ದಿನಾಂಕ 13.12.2008 ರಿಂದ ಪ್ರಾಧಿಕಾರದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದು, ಸದರಿಯವರಿಗೆ ರಾಜ್ಯ ಸಚಿವ ಸ್ಥಾನಮಾನ ನೀಡಿರುವುದರಿಂದ ಇವರಿಗೆ ವಾಹನ ಸೌಲಭ್ಯ ಪಡೆಯಲು ಅವಕಾಶವಿರುತ್ತದೆ. ಆದ್ದರಿಂದ 'Toyota Innova-2.5VX, Suffix-BD (Diesel), 7 Seater-Silver color' ಕಾರಿನ ಸೌಭ್ಯವನ್ನು ಒದಗಿಸಿಕೊಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 115 ಕಸನಿ 2009, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2009**

ಅಧ್ಯಕ್ಷರು, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಇವರಿಗೆ ಹೊಸ ವಾಹನವನ್ನು ರೂ.11.00 ಲಕ್ಷಗಳ ಮಿತಿಯೊಳಗೆ ಖರೀದಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 933 ವೆಚ್ಚ–7/2009 ದಿನಾಂಕ 01.10.2009 ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2500

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಆಯುಕ್ತರ ಕಛೇರಿಯ ಹುದ್ದೆಗಳನ್ನು ದಿನಾಂಕ: 27–8–2009 ರಿಂದ ದಿನಾಂಕ: 26–8–2010 ರವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 95 ಕೆಎಂಯು 2004 ದಿನಾಂಕ 26–8–2004.
2) ಸರ್ಕಾರಿ ಆದೇಶಸಂಖ್ಯೆ: ಕಸಂವಾಪ್ರ 110 ಕೆಎಂಯು 2006 ದಿನಾಂಕ: 27–8–2006
3) ತಿದ್ದುಪಡಿ ಆದೇಶ ಸಂಖ್ಯೆ: ಕಸಂವಾಪ್ರ 110 ಕೆಎಂಯು 2006 ದಿನಾಂಕ 22–12–2006
4) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 199 ಕೆಎಂಯು 2007 ದಿನಾಂಕ 24–10–2007.
5) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 267 ಕೆಎಂಯು 2007 ದಿನಾಂಕ: 31–1–2008
6) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 196 ಕೆಎಂಯು 2008 ದಿನಾಂಕ 05–12–2008
7) ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ ಅಪ್ರಾಸಂಪ:ಇಎಸ್‌ಟಿ:2009–10/183 ದಿನಾಂಕ: 17.08.2009

**ಪ್ರಸ್ತಾವನೆ:**

ಮೇಲೆ(1)ರಲ್ಲಿ ಓದಲಾದ ದಿನಾಂಕ: 26–08–2004ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಗೆ ಈ ಕೆಳಕಂಡ 10 ಹುದ್ದೆಗಳನ್ನು ಸೃಜಿಸಿ ಒಂದು ವರ್ಷದ ಅವಧಿಗೆ ಮುಂದುವರಿಸಿದೆ:

| | | |
|---|---|---|
| 1. | ಆಯುಕ್ತರ ತಾಂತ್ರಿಕ ಸಹಾಯಕರು | 1 ಹುದ್ದೆ |
| 2. | ಪತ್ರಾಂಕಿತ ವ್ಯವಸ್ಥಾಪಕರು | 1 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 4. | ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ | 1 ಹುದ್ದೆ |
| 5. | ವಾಹನ ಚಾಲಕ | 1 ಹುದ್ದೆ |
| 6. | ಅಟೆಂಡರ್ | 1 ಹುದ್ದೆ |

ಹಾಗೂ ಉಪನಿರ್ದೇಶಕರ ಕಛೇರಿ, ಮೈಸೂರು ಇಲ್ಲಿನ ಕೆಳಕಂಡ 4 ಹುದ್ದೆಗಳು:–

| | | |
|---|---|---|
| 1. | ಉಪನಿರ್ದೇಶಕರು | 1 ಹುದ್ದೆ |
| 2. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3. | ಶೀಘ್ರಲಿಪಿಗಾರರು | 1 ಹುದ್ದೆ |
| 4. | ಗ್ರೂಪ್–ಡಿ | 1 ಹುದ್ದೆ |

ಮೇಲೆ ಓದಲಾದ (2) ಮತ್ತು (3) ರಲ್ಲಿನ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಒಂದೊಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ. ನಂತರ ಮೇಲೆ ಓದಲಾದ (4) ರ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:27–8–2007 ರಿಂದ ದಿ: 26–8–2008ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ (5)ರಲ್ಲಿ ಓದಲಾದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ ಮುಂದುವರಿದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ 2007–08ನೇ ಸಾಲಿನ ಹೊಸ ಘಟಕಗಳಿಗೆ ಹುದ್ದೆಗಳ ಸೃಜನೆಗೆ ಸಂಬಂಧಿಸಿದಂತೆ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಅಧ್ಯರ್ಪಿಸಲಾಗಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗೆ ಬದಲಾಗಿ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ವೇತನ ಶ್ರೇಣಿ ರೂ.14050–25050 ರಲ್ಲಿ ಸೃಜಿಸಲಾಗಿದೆ. ಮತ್ತು ಈ ಹುದ್ದೆಯಲ್ಲಿ ಪುರಾತತ್ವ ಸಂರಕ್ಷಣಾ ಇಂಜಿನಿಯರ್‌ರವರು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. ಮೇಲೆ (6) ರಲ್ಲಿ ಓದಲಾದ ಆದೇಶದಲ್ಲಿ 10 ಹುದ್ದೆಗಳನ್ನು ದಿನಾಂಕ 27.08.2008 ರಿಂದ 26.08.2009ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಅವರು ಮೇಲೆ (7) ರಲ್ಲಿ

ಓದಲಾದ ದಿನಾಂಕ: 17.08.2009ರ ಪತ್ರದಲ್ಲಿ ಮೇಲಿನ 10 ಹುದ್ದೆಗಳನ್ನು ದಿನಾಂಕ: 27–08–2008 ರಿಂದ ಮತ್ತೊಂದು ವರ್ಷದವರೆಗೆ ಮುಂದುವರಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 175 ಕೆಎಂಯು 2009, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಸರ್ಕಾರವು ಆಯುಕ್ತರು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿರುವ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 27–08–2009 ರಿಂದ ದಿನಾಂಕ: 26–08–2010 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಲಾಗಿದೆ.

| | |
|---|---|
| 1. ಪುರಾತತ್ವ ಸಂರಕ್ಷಣಾ ಇಂಜಿನಿಯರ್ | 1 ಹುದ್ದೆ |
| 2. ತಾಂತ್ರಿಕ ಸಹಾಯಕರು | 1 ಹುದ್ದೆ |
| 3. ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 4. ಬೆರಳಚ್ಚುಗಾರರು | 1 ಹುದ್ದೆ |
| 5. ವಾಹನ ಚಾಲಕ | 1 ಹುದ್ದೆ |
| 6. ಅಟೆಂಡರ್ | 1 ಹುದ್ದೆ |

ಹಾಗೂ ಉಪನಿರ್ದೇಶಕರ ಕಛೇರಿ, ಮೈಸೂರು ಇಲ್ಲಿನ ಕೆಳಕಂಡ 4 ಹುದ್ದೆಗಳು

| | |
|---|---|
| 1. ಉಪನಿರ್ದೇಶಕರು | 1 ಹುದ್ದೆ |
| 2. ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3. ಶೀಘ್ರಲಿಪಿಗಾರರು | 1 ಹುದ್ದೆ |
| 4. ಗ್ರೂಪ್–ಡಿ | 1 ಹುದ್ದೆ |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 1412 ಐಎಫ್ಎಸ್ 2009 ದಿನಾಂಕ:24–10–2009 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2582 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2009–10ನೇ ಸಾಲಿಗೆ ಇ–ಆಡಳಿತ ವಾರ್ಷಿಕ ಕ್ರಿಯಾ ಯೋಜನೆಯ ಅನುಷ್ಠಾಕ್ಕೆ (ಕಂಪ್ಯೂಟರ್ ಹಾಗೂ ಇತರೆ ಪೂರಕ ಪರಿಕರಗಳ ಖರೀದಿಗೆ) ಹಣ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇ–ಆಡಳಿತ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 24.06.2009 ರಂದು ನಡೆದ ಇ–ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳ ಅನುಮೋದನೆ ಸಮಿತಿ ಸಭೆಯ ನಡವಳಿಗಳು

2. ಸರ್ಕಾರದ ಕಾರ್ಯದರ್ಶಿಗಳು, ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 16.09.2009 ರಂದು ನಡೆದ ವಾರ್ಷಿಕ ಇ–ಆಡಳಿತ ಯೋಜನೆಗಳಿಗೆ ಇಲಾಖಾ ತಾಂತ್ರಿಕ ಸಮಿತಿಯ ಅನುಮೋದನೆ ನೀಡುವ ಬಗ್ಗೆ ನಡೆದ ಸಭೆಯ ನಡವಳಿಗಳು.

3. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ 06 ಕಂನಿಶಾ 2009–10, ದಿನಾಂಕ 29.08.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 24.06.2009ರ ಇ–ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳ ಅನುಮೋದನೆ ಸಮಿತಿ ಸಭೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಕ್ಕೆ ಕಂಪ್ಯೂಟರ್ ಹಾಗೂ ಇತರೆ ಪೂರಕ ಪರಿಕರಗಳ ಖರೀದಿಗೆ ಸಂಬಂಧಿಸಿದಂತೆ 2009–10ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಗೆ ರೂ.9.86 ಲಕ್ಷ ರೂಪಾಯಿಗಳಿಗೆ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 16.09.2009ರ ವಾರ್ಷಿಕ ಇ–ಆಡಳಿತ ಯೋಜನೆಗಳಿಗೆ ಇಲಾಖಾ ತಾಂತ್ರಿಕ ಸಮಿತಿಯ ಅನುಮೋದನೆ ಸಭೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ 1 KVA ಸಾಮರ್ಥ್ಯವುಳ್ಳ 7 ಯುಪಿಎಸ್ ಗಳ

ಅವಶ್ಯಕತೆ ಇಲ್ಲದಿದ್ದಲ್ಲಿ 2 KVA ಸಾಮರ್ಥ್ಯವುಳ್ಳ 3 ಅಥವಾ 4 ಯುಪಿಎಸ್ ಗಳನ್ನು ಒಟ್ಟಾರೆ ವೆಚ್ಚ ರೂ.1,10,000/– ಗಳ ಮಿತಿಯೊಳಗೆ ಖರೀದಿಸಲು ಅನುಮತಿ ನೀಡಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 29.08.2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಇಲಾಖೆಯ ಕೇಂದ್ರ ಕಛೇರಿಯ ಕಾರ್ಯನಿರ್ವಹಣೆಯನ್ನು ಸಂಪೂರ್ಣ ಕಂಪ್ಯೂಟರೀಕರಣಗೊಳಿಸುವುದಕ್ಕಾಗಿ 2009–10ನೇ ಸಾಲಿನಲ್ಲಿ ನಿರ್ದೇಶನಾಲಯದ ಕ್ರಿಯಾಯೋಜನೆಯಲ್ಲಿ ರೂ.10.00 ಲಕ್ಷಗಳ ಅವಕಾಶ ಮಾಡಿಕೊಂಡಿದ್ದು, ಈ ಪೈಕಿ ರೂ.9,66,800/– ಗಳನ್ನು ಮಂಜೂರು ಮಾಡಬೇಕೆಂದು ಹಾಗೂ ಆ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–102–4–01–015 ಅಡಿಯಲ್ಲಿ ಭರಿಸಬಹುದೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 91 ಕಸನಿ 2009, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೇಂದ್ರ ಕಛೇರಿಯ ಕಾರ್ಯನಿರ್ವಹಣೆಯನ್ನು ಸಂಪೂರ್ಣ ಕಂಪ್ಯೂಟರೀಕರಣಗೊಳಿಸುವುದಕ್ಕಾಗಿ 2009–10ನೇ ಸಾಲಿಗೆ ಇ–ಆಡಳಿತ ವಾರ್ಷಿಕ ಕ್ರಿಯಾ ಯೋಜನೆಯ ಅನುಷ್ಠಾನಕ್ಕಾಗಿ ರೂ.9,66,800/– (ರೂಪಾಯಿ ಒಂಭತ್ತು ಲಕ್ಷದ ಅರವತ್ತಾರು ಸಾವಿರದ ಎಂಟುನೂರು) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆ ಮಾಡಿದೆ.

1. ಕರ್ನಾಟಕ ವಸ್ತು ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999–2000 ಗಳನ್ನು ಅನುಸರಿಸುವುದು.
2. ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–01–015 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 30.10.2009ರ ಟಿಪ್ಪಣಿ ಸಂಖ್ಯೆ ಶಿಇ 2680 ಐಎಫ್ (ಬಿ&ಎ) 2009 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, ಇವರ ಸಹಮತಿಯನ್ನು ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2583 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಕೇಂದ್ರ ಕಚೇರಿ, ವಿಭಾಗಿಯ ಕಛೇರಿಗಳಾದ ಮೈಸೂರು, ಧಾರವಾಡ ಕಛೇರಿಗಳ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕಾರ್ಯಕ್ರಮ (ಲ್ಯಾಮಿನೇಷನ್ ಟಿಶ್ಯೂಪೇಪರ್ ಹಾಗೂ ಬೈಂಡಿಂಗ್) ಮಾಡಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಎಆರ್ಎಸ್ 20 ಎಡಿಎಂ 2009 ದಿನಾಂಕ 14.08.2009 ಮತ್ತು 16.09.2009

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 16.09.2009ರ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು ಇವರು ಪತ್ರಾಗಾರ ಇಲಾಖೆ ಕೇಂದ್ರ ಕಛೇರಿ, ವಿಭಾಗೀಯ ಕಛೇರಿಗಳಾದ ಮೈಸೂರು, ಧಾರವಾಡ ಕಛೇರಿಗಳ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕಾರ್ಯಕ್ರಮ (ಲ್ಯಾಮಿನೇಷನ್ ಟಿಶ್ಯೂಪೇಪರ್ ಹಾಗೂ ಬೈಂಡಿಂಗ್) ಮಾಡಿಸಲು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–104–0–01–059 ಇತರೆ ಖರ್ಚುಗಳು ಯೋಜನೆ ಕಾರ್ಯಕ್ರಮದಡಿಯಲ್ಲಿ ರೂ.15.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹಾಗೂ ಈ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕಾರ್ಯವನ್ನು ಮೆ:ಕಲಾಧವಾನಿ, ನವದೆಹಲಿ ಇವರಿಂದ ಪ್ರಾರಂಭಿಸಲು ನೀಡಿರುವ ಆದೇಶಕ್ಕೆ ಆಡಳಿತಾತ್ಮಕ ಅನುಮತಿ ಆದೇಶವನ್ನು ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 13 ರಾಪಸ 2009, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ ಕೇಂದ್ರ ಕಚೇರಿ, ವಿಭಾಗಿಯ ಕಛೇರಿಗಳಾದ ಮೈಸೂರು, ಧಾರವಾಡ ಕಛೇರಿಗಳ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕಾರ್ಯಕ್ರಮಕ್ಕೆ (ಲ್ಯಾಮಿನೇಷನ್ ಟಿಶ್ಯೂಪೇಪರ್ ಹಾಗೂ ಬೈಂಡಿಂಗ್) ರೂ.15.00 ಲಕ್ಷಗಳನ್ನು (ರೂಪಾಯಿ ಹದಿನೈದು ಲಕ್ಷಗಳು ಮಾತ್ರ) ಈ ಕೆಳಕಂಡ

ಷರತ್ತಿಗೊಳಪಟ್ಟು ನಿರ್ದೇಶಕರು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ರವರಿಗೆ ಬಿಡುಗಡೆ ಮಾಡಿದೆ ಹಾಗೂ ಸದರಿ ದಾಖಲೆಗಳ ನಿರ್ವಹಣೆ ಮತ್ತು ಸಂರಕ್ಷಣೆ ಕಾರ್ಯವನ್ನು ಮೆ:ಕಲಾಧವಾನಿ, ನವದೆಹಲಿ ಇವರಿಂದ ಪ್ರಾರಂಭಿಸಲು ನೀಡಿರುವ ಆದೇಶಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಕರ್ನಾಟಕ ವಸ್ತು ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999 ಹಾಗೂ ಅದರ ನಿಯಮಗಳು 2000 ನ್ನು ಅನುಸರಿಸಬೇಕು.
2. ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರ ಒದಗಿಸಬೇಕು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–104–0–01–059 (ಇತರೆ ಖರ್ಚುಗಳು) (ಯೋಜನೆ)ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 12.01.2009ರ ಟಿಪ್ಪಣಿ ಸಂಖ್ಯೆ ಇಡಿ 81 ಐಎಫ್ (ಬಿಎ) 2008 ರಲ್ಲಿ ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, ಇವರ ಸಹಮತಿಯನ್ನು ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2584 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಕಛೇರಿಯ ಲೆಕ್ಕಾಧೀಕ್ಷಕರ ಹುದ್ದೆಯನ್ನು ಲೆಕ್ಕ ಪರಿಶೋಧಕರ (ಆಡಿಟ್ ಆಫೀಸರ್) ಹುದ್ದೆಗೆ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 97 ಕೆಎಂಯು 1998 (ಭಾ–2) ದಿನಾಂಕ 21.03.2002
2. ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರ ಪತ್ರ ಸಂಖ್ಯೆ ಹವಿಪಪ್ರನಿಪ್ರಾ/ಹೊ/131/2008–09/71 ದಿನಾಂಕ 12.05.2009
3. ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ ಆಇ 250 ರಾಲೆಪ ದಿನಾಂಕ 09.07.2009
4. ಜಿಲ್ಲಾಧಿಕಾರಿಗಳು, ಬಳ್ಳಾರಿ ಹಾಗೂ ಅಧ್ಯಕ್ಷರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರ ಪತ್ರ ಸಂಖ್ಯೆ: ಹವಿಪಪ್ರನಿಪ್ರಾ/ಹೊ/131/2008–09, ದಿನಾಂಕ 17.07.2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಒಂದು ಲೆಕ್ಕಾಧೀಕ್ಷಕರ ಹುದ್ದೆಯನ್ನು ಮಂಜೂರು ಮಾಡಿ ಆದೇಶಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಈ ಪ್ರಾಧಿಕಾರಕ್ಕೆ ಸರ್ಕಾರದ ಪ್ರವಾಸೋದ್ಯಮ ಇಲಾಖೆ ಮತ್ತು ಕೇಂದ್ರ/ರಾಜ್ಯ ಪುರಾತತ್ವ ಇಲಾಖೆಯಿಂದ ಹಾಗೂ ಇತರೆ ಸಂಘ ಸಂಸ್ಥೆಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಅನುದಾನ ಬಿಡುಗಡೆಯಾಗುತ್ತಿದ್ದು, ಇವುಗಳ ಲೆಕ್ಕಪತ್ರಗಳನ್ನು ವ್ಯವಸ್ಥಿತ ರೀತಿಯಲ್ಲಿ ಮತ್ತು ಸಮರ್ಪಕವಾಗಿ ನಿರ್ವಹಿಸಲು ಲೆಕ್ಕಾಧೀಕ್ಷಕರ ಹುದ್ದೆಯನ್ನು ಲೆಕ್ಕ ಪರಿಶೋಧಕ (ಆಡಿಟ್ ಆಫೀಸರ್) ಹುದ್ದೆಗೆ ಮೇಲ್ದರ್ಜೆಗೇರಿಸುವುದು ಅವಶ್ಯಕತೆ ಇರುತ್ತದೆಯೆಂದು ತಿಳಿಸಿ, ಸದರಿ ಹುದೆಯಲ್ಲಿ ಶ್ರೀ ಕೆ. ಪಾಂಡುರಂಗ ವಿಠಲ್‌ರವರು ಕಾರ್ಯ ನಿರ್ವಹಿಸುತ್ತಿದ್ದು, ಸದರಿಯವರಿಗೆ ಹೆಚ್ಚಿನ ಅನುಭವವಿದ್ದು, ಅವರನ್ನೇ ಮುಂದುವರೆಸಲು ಕೋರಿರುವರು.

ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಆರ್ಥಿಕ ಇಲಾಖೆಯು ಶ್ರೀ ಕೆ. ಪಾಂಡುರಂಗ ವಿಠಲ್, ಆಯುಕ್ತರ ಕಛೇರಿ, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರನ್ನು ಉನ್ನತೀಕರಿಸಿದ ಹುದ್ದೆಯಾದ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಈಗಾಗಲೇ ನೇಮಿಸಿ ಆದೇಶಿಸಿರುತ್ತದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಹಾಗೂ ಅಧ್ಯಕ್ಷರು, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರು ಪತ್ರ ಬರೆದು ಶ್ರೀ ಪಾಂಡುರಂಗ ವಿಠಲ್ ಅವರನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ನೇಮಿಸಿ ಆದೇಶಿಸಿರುವುದನ್ನು ಪರಿಗಣಿಸಿ ಲೆಕ್ಕಾಧೀಕ್ಷಕರ ಹುದ್ದೆಯನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಮೇಲ್ದರ್ಜೆಗೇರಿಸಿ ಆದೇಶಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 105 ಕೆಎಂಯು 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಆಯುಕ್ತರ ಕಛೇರಿ, ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇಲ್ಲಿನ ಲೆಕ್ಕಾಧೀಕ್ಷಕರ ಹುದ್ದೆಯನ್ನು ಲೆಕ್ಕ ಪರಿಶೋಧಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಯವರೆಗೆ ಮೇಲ್ದರ್ಜೆಗೇರಿಸಲಾಗಿದೆ

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 902 ವೆಚ್ಚ–7/2009 ದಿನಾಂಕ 24.10.2009 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2585

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮೈಸೂರು ಇವರಿಗೆ ಅಂಚೆ ಮೂಲಕ ಕನ್ನಡ ಶಿಕ್ಷಣ ಯೋಜನೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ:ಕಸನಿ:5:ಸಿಬ್ಬಂದಿ:ಕಅ: 2009–10 ದಿನಾಂಕ: 23.06.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 23.06.2009 ರ ಪತ್ರದಲ್ಲಿ ನಿರ್ದೇಶಕಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಆಡಳಿತ ವ್ಯವಹಾರದಲ್ಲಿ ಕನ್ನಡ ಬಳಸಲು ಅನುಕೂಲವಾಗುವ ಉದ್ದೇಶದಿಂದ ಕನ್ನಡ ಬಾರದ ಸರ್ಕಾರದ ಅನುದಾನ ಪಡೆದ ಸಂಸ್ಥೆ, ಮಂಡಳಿ, ನಿಗಮ ಹಾಗೂ ಕೇಂದ್ರ ಸರ್ಕಾರದ ಅಧಿಕಾರಿ/ಸಿಬ್ಬಂದಿಗೆ ವಿಶ್ವವಿದ್ಯಾನಿಲಯದವರೆಗೆ ಬ್ಯಾಂಕ್ ಸಿಬ್ಬಂದಿಗೆ ಗಣಕ ಮತ್ತಿತರ ಸಾರ್ವಜನಿಕರಿಗೆ ಅಂಚೆಯ ಮೂಲಕ ಕನ್ನಡ ಕಲಿಸಲಾಗುತ್ತಿದ್ದು, ಅಂಚೆ ಮೂಲಕ ಕನ್ನಡ ಶಿಕ್ಷಣ ಯೋಜನೆಯಡಿ ಕೆಲಸ ಮಾಡುವ ಕಾರ್ಯಕರ್ತರಿಗೆ ಸಿಬ್ಬಂದಿ ವೇತನ ನೀಡಲು, ಪಾಠಾವಳಿಗಳನ್ನು ಮುದ್ರಿಸಲು, ಲೇಖನ ಸಾಮಗ್ರಿ ಖರೀದಿಸಲು, ರಾಜ್ಯಾದ್ಯಂತ ಸಂಪರ್ಕ ಶಿಬಿರ ಏರ್ಪಡಿಸುವ ಮತ್ತಿತರ ವೆಚ್ಚಗಳಿಗಾಗಿ ಶೈಕ್ಷಣಿಕ ಕಾರ್ಯದರ್ಶಿ ಹಾಗೂ ಪ್ರಭಾರಿ ಅಧಿಕಾರಿ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ಮೈಸೂರು ಇವರಿಗೆ ಮೊದಲ ಕಂತಾಗಿ ರೂ.2.00ಲಕ್ಷಗಳ ಅನುದಾನ ಬಿಡುಗಡೆ ಮಾಡಬೇಕಾಗಿರುತ್ತದೆಂದು, ಸದರಿ ಯೋಜನೆಗಾಗಿ ಪ್ರಸಕ್ತ ಸಾಲಿನ ಕ್ರಿಯಾ ಯೋಜನೆಯಲ್ಲಿ ರೂ.3.00ಲಕ್ಷಗಳಿಗೆ ಅವಕಾಶ ಮಾಡಿಕೊಂಡಿರುವುದರಿಂದ , ಈ ಮೊತ್ತದಿಂದ ಮೊದಲ ಕಂತಿನ ಹಣ ರೂ.2.00ಲಕ್ಷಗಳನ್ನು ಮಂಜೂರು ಮಾಡುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಕೋರಿರುತ್ತಾರೆ. ಹಾಗೂ ಸದರಿ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2205–00–001–0–01–059(ಯೋಜನೆ) ಕ್ರಿಯಾ ಯೋಜನೆ(1)ರ ಉಪಕಂಡಿಕೆ(4)ರ ಲೆಕ್ಕ ಶೀರ್ಷಿಕೆಯಡಿ ಭರಿಸಬಹುದೆಂದು ತಿಳಿಸಿ ತಡೆಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 136 ಕಸನಿ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಅಂಚೆ ಮೂಲಕ ಕನ್ನಡ ಶಿಕ್ಷಣ ಯೋಜನೆಯಡಿ ಕೆಲಸ ಮಾಡುವ ಕಾರ್ಯಕರ್ತರಿಗೆ ಸಿಬ್ಬಂದಿ ವೇತನ ನೀಡಲು, ಪಾಠಾವಳಿಗಳನ್ನು ಮುದ್ರಿಸಲು, ಲೇಖನ ಸಾಮಗ್ರಿ ಖರೀದಿಸಲು, ರಾಜ್ಯಾದ್ಯಂತ ಸಂಪರ್ಕ ಶಿಬಿರ ಏರ್ಪಡಿಸುವ ಮತ್ತಿತರ ವೆಚ್ಚಗಳಿಗಾಗಿ ಶೈಕ್ಷಣಿಕ ಕಾರ್ಯದರ್ಶಿ ಹಾಗೂ ಪ್ರಭಾರಿ ಅಧಿಕಾರಿ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ ಮೈಸೂರು ಇವರಿಗೆ ಮೊದಲ ಕಂತಾಗಿ ರೂ.2.00ಲಕ್ಷಗಳ ಅನುದಾನ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಸದರಿ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇತರೆ ಖರ್ಚುಗಳು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಶಿಇ 2651 ಐಎಫ್ (ಬಿ&ಎ) 2009 ದಿನಾಂಕ 28.10.2009 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2645

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** 2009–10ನೇ ಸಾಲಿನಲ್ಲಿ ಪುರಾತತ್ವ ವಿಚಾರ ಸಂಕಿರಣ, ವಸ್ತು ಪ್ರದರ್ಶನ, ಪರಂಪರೆ ಉಳಿಸಿ ಸಪ್ತಾಹ ಇತ್ಯಾದಿ ಕಾರ್ಯ ಕ್ರಮಗಳಿಗೆ ಅನುದಾನದ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ.2/1/2008–09 ದಿನಾಂಕ 03.11.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಪ್ರಸ್ತಾವನೆ ಸಲ್ಲಿಸಿ. ಒಟ್ಟು ರೂ.8.40 ಲಕ್ಷಗಳಿಗೆ ಈ ಕೆಳಗಿನಂತೆ ಕಾರ್ಯಕ್ರಮಗಳಿಗೆ ಘಟನೋತ್ತರ ಮಂಜೂರಾತಿ ನೀಡಲು ಕೋರಿರುತ್ತಾರೆ.

| ಕ್ರಮ ಸಂಖ್ಯೆ | ಕಾರ್ಯಕ್ರಮಗಳ ವಿವರಗಳು | ನಿಗದಿತ ಅಂದಾಜು ಮೊಬಲಗು ರೂ. ಲಕ್ಷಗಳಲ್ಲಿ | ಷರಾ |
|---|---|---|---|
| | **ಪುರಾತತ್ವ ವಿಚಾರ ಸಂಕಿರಣಗಳು** | | |
| 1 | ಬೆಳಗಾಂ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | 1.50 | ಈ ವಿಚಾರ ಸಂಕಿರಣವನ್ನು ದಿನಾಂಕ 18–7–2009 ಮತ್ತು 19–7–2009 ರಂದು ನಡೆಸಲಾಗಿದ್ದು ನಿಗದಿತ ಅನುದಾನದ ಪರಿಮಿತಿಯಲ್ಲಿ ವೆಚ್ಚ ಮಾಡಲಾಗಿದೆ. |
| 2 | ಮೈಸೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | 1.50 | ಈ ವಿಚಾರ ಸಂಕಿರಣವನ್ನು ದಿನಾಂಕ 15–10–2009 ಮತ್ತು 16–10–2009 ರಂದು ನಡೆಸಲಾಗಿದ್ದು ನಿಗದಿತ ಅನುದಾನದ ಪರಿಮಿತಿಯಲ್ಲಿ ವೆಚ್ಚ ಮಾಡಲಾಗಿದೆ. |
| 3 | ಕಿತ್ತೂರು ಸಂಸ್ಥಾನದ ಇತಿಹಾಸ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ಇವರ ಸಹಯೋಗ ದೊಂದಿಗೆ. | 0.65 | ಈ ವಿಚಾರ ಸಂಕಿರಣವನ್ನು ದಿನಾಂಕ 22–4–2009 ಮತ್ತು 23–4–2009 ನಡೆಸಲಾಗಿದ್ದು ನಿಗದಿತ ಅನುದಾನದ ಪರಿಮಿತಿಯಲ್ಲಿ ವೆಚ್ಚ ಮಾಡಲಾಗಿದೆ. |
| 4 | ಸಂಗೊಳ್ಳಿ ರಾಯಣ್ಣ ಕುರಿತ ವಿಚಾರ ಸಂಕಿರಣ | 1.00 | ಈ ವಿಚಾರ ಸಂಕಿರಣವನ್ನು ದಿನಾಂಕ 2–9–2009 ಮತ್ತು 3–9–2009 ರಂದು ನಡೆಸಲಾಗಿದ್ದು ನಿಗದಿತ ಅನುದಾನದ ಪರಿಮಿತಿಯಲ್ಲಿ ವೆಚ್ಚ ಮಾಡಲಾಗಿದೆ. |
| | **ಪುರಾತತ್ವ ವಸ್ತು ಪ್ರದರ್ಶನ** | | |
| 1 | ಮೈಸೂರು ದಸರಾ ಉತ್ಸವ ಸಂದರ್ಭದಲ್ಲಿ ಕೈಗೊಳ್ಳಲಾದ ಪುರಾತತ್ವ ವಸ್ತು ಪ್ರದರ್ಶನ | 3.00 | ಈ ವಸ್ತು ಪ್ರದರ್ಶನವನ್ನು ದಿನಾಂಕ 19–9–2009ರಂದು ವಸ್ತು ಪ್ರದರ್ಶನ ಪ್ರಾಧಿಕಾರದಲ್ಲಿರುವ ಈ ನಿರ್ದೇಶನಾಲಯದ ಆವರಣದಲ್ಲಿ ಉದ್ಘಾಟಿಸಲಾಗಿದ್ದು ಅದರಂತೆ ಮುಂದುವರಿಯುತ್ತಿದೆ. |

| ಕ್ರಮ ಸಂಖ್ಯೆ | ಕಾರ್ಯಕ್ರಮಗಳ ವಿವರಗಳು | ನಿಗದಿತ ಅಂದಾಜು ಮೊಬಲಗು ರೂ. ಲಕ್ಷಗಳಲ್ಲಿ | ಷರಾ |
|---|---|---|---|
| | **ಪರಂಪರೆ ಉಳಿಸಿ ಸಪ್ತಾಹದ ಆಚರಣೆ** | | |
| 1 | ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು ಇವರ ಸಹಯೋಗದೊಂದಿಗೆ ಕೈಗೊಂಡಿರುವ ಕಾರ್ಯಕ್ರಮ | 0.75 | ಈ ಕಾರ್ಯಕ್ರಮವನ್ನು ದಿನಾಂಕ 16–8–2009ರಂದು ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು ಇವರ ಸಹಯೋಗ ದೊಂದಿಗೆ ನಡೆದಿದ್ದು ಇವರು ಕೈಗೊಂಡಿರುವ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹದ ಆಚರಣೆ ಹಾಗೂ ಇವರು ಹೊರ ತರುವ ಇತಿಹಾಸ ದರ್ಶನ ಪುಸ್ತಕದ ಸಂಚಿಕೆಯ ಮುದ್ರಣದ ಬಾಬ್ತು ಸೇರಿದಂತೆ ರೂ.75,000/– ವನ್ನು ಪೇಯೀಸ್ ರೆಸಿಟ್ ಮೂಲಕ ನೀಡಬೇಕಾಗಿದೆ. |
| | **ಒಟ್ಟು** | **8.40** | |

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 96 ಕೆಎಂಯು 2009, ಬೆಂಗಳೂರು, ದಿನಾಂಕ: 26ನೇ ನವೆಂಬರ್ 2009**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಈ ಕೆಳಗಿನ ಕಾಮಗಾರಿ/ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದಕ್ಕೆ ಒಟ್ಟು ರೂ.8.40 ಲಕ್ಷಗಳನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಭರಿಸಲು (ಪಾರದರ್ಶಕ ಅಧಿನಿಯಮ 1999–2000 ಗಳನ್ನು ಅನುಸರಿಸತಕ್ಕದ್ದು. ಹಣಬಳಕೆ ಪ್ರಮಾಣ ಪತ್ರ ಸರ್ಕಾರಕ್ಕೆ ಸಲ್ಲಿಸಬೇಕೆಂಬ ಷರತ್ತಿಗೊಳಪಟ್ಟು) ಘಟನೋತ್ತರ ಮಂಜೂರಾತಿ ನೀಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಕಾರ್ಯಕ್ರಮಗಳ ವಿವರಗಳು | ನಿಗದಿತ ಅಂದಾಜು ಮೊಬಲಗು ರೂ. ಲಕ್ಷಗಳಲ್ಲಿ |
|---|---|---|
| | **ಪುರಾತತ್ವ ವಿಚಾರ ಸಂಕಿರಣಗಳು** | |
| 1 | ಬೆಳಗಾಂ ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | 1.50 |
| 2 | ಮೈಸೂರು ಜಿಲ್ಲೆ ಇತಿಹಾಸ ಮತ್ತು ಪುರಾತತ್ವ ಕುರಿತ ವಿಚಾರ ಸಂಕಿರಣ | 1.50 |
| 3 | ಕಿತ್ತೂರು ಸಂಸ್ಥಾನದ ಇತಿಹಾಸ ಕುರಿತು ರಾಷ್ಟ್ರೀಯ ವಿಚಾರ ಸಂಕಿರಣ, ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ಇವರ ಸಹಯೋಗ ದೊಂದಿಗೆ. | 0.65 |
| 4 | ಸಂಗೊಳ್ಳಿ ರಾಯಣ್ಣ ಕುರಿತ ವಿಚಾರ ಸಂಕಿರಣ | 1.00 |
| | **ಪುರಾತತ್ವ ವಸ್ತು ಪ್ರದರ್ಶನ** | |
| 1 | ಮೈಸೂರು ದಸರಾ ಉತ್ಸವ ಸಂದರ್ಭದಲ್ಲಿ ಕೈಗೊಳ್ಳಲಾದ ಪುರಾತತ್ವ ವಸ್ತು ಪ್ರದರ್ಶನ | 3.00 |
| | **ಪರಂಪರೆ ಉಳಿಸಿ ಸಪ್ತಾಹದ ಆಚರಣೆ** | |
| 1 | ಕರ್ನಾಟಕ ಇತಿಹಾಸ ಅಕಾಡೆಮಿ (ರಿ) ಬೆಂಗಳೂರು ಇವರ ಸಹಯೋಗದೊಂದಿಗೆ ಕೈಗೊಂಡಿರುವ ಕಾರ್ಯಕ್ರಮ | 0.75 |
| | **ಒಟ್ಟು** | **8.40** |

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 2841 ಐಎಫ್(ಬಿ&ಎ) 2009, ದಿನಾಂಕ 17.11.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2723 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ದಿ. ಅ.ನ.ಕೃ. ಪ್ರತಿಷ್ಠಾನ ಇವರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನೀಡಿದ ನಿವೇಶನಕ್ಕೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 56 ಕಸನಿ 2008, ದಿನಾಂಕ 20.11.2008

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ:16:ಸ್ಮಾರಕ:2002–03, ದಿನಾಂಕ 10.07.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 20.11.2008ರ ಸರ್ಕಾರಿ ಆದೇಶದಲ್ಲಿ ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರು/ಸಾಹಿತಿಗಳಾದ ಅ.ನ. ಕೃಷ್ಣರಾಯರ ಸ್ಮಾರಕವನ್ನು ಬೆಂಗಳೂರಿನಲ್ಲಿ ನಿರ್ಮಿಸಲು ನಿವೇಶನದ ಮೊತ್ತ ರೂ.41.00 ಲಕ್ಷಗಳನ್ನು ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ: 10.07.2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ದಿ: ಅ.ನ.ಕೃ, ಪ್ರತಿಷ್ಠಾನ ಇವರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನೀಡಿದ ನಿವೇಶನವನ್ನು ಪ್ರತಿಷ್ಠಾನಕ್ಕೆ ನೋಂದಣಿ ಮಾಡಿಸಿಕೊಳ್ಳಲು ಪ್ರಕ್ರಿಯೆಗಳು ನಡೆಯುತ್ತಿದ್ದು, ನಿಗದಿ ಶುಲ್ಕ, ಸ್ಟಾಂಪ್ ಡ್ಯೂಟಿ, ಬಿಡಿಎ ಗೆ ಹೆಚ್ಚುವರಿ ಹಣ ಪಾವತಿಗಾಗಿ ರೂ.5,86,267/– ಗಳ ಅನುದಾನ ನೀಡಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಕಾರ್ಯಧ್ಯಕ್ಷರು, ಅ.ನ.ಕೃ. ಪ್ರತಿಷ್ಠಾನ, ವಿ.ಎಲ್.ಎಲ್, ನಿರ್ಮಾಣ್ ಭವನ್, ನಂ.71, ಕೃಷ್ಣರಾಜೇಂದ್ರ ರಸ್ತೆ, ಬಸವನಗುಡಿ, ಬೆಂಗಳೂರು ಇವರಿಗೆ ರೂ.2,10,550/– ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹಾಗೂ ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 4202–04–800–1–08–132 (ಯೋಜನೆ) ಕ್ರಿ.ಯೋ. ಸಂ. 39 ಗಡಿ ಭಾಗಗಳಲ್ಲಿ ಸುವರ್ಣ ಸೌಧ ನಿರ್ಮಾಣ ಇದರಡಿ ಭರಿಸಬಹುದೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 98 ಕಸನಿ 2009, ಬೆಂಗಳೂರು, ದಿನಾಂಕ: 3ನೇ ಡಿಸೆಂಬರ್ 2009**

ದಿ: ಅ.ನ.ಕೃ, ಪ್ರತಿಷ್ಠಾನ ಇವರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನೀಡಿದ ನಿವೇಶನವನ್ನು ಪ್ರತಿಷ್ಠಾನಕ್ಕೆ ನೋಂದಣಿ ಮಾಡಿಸಿಕೊಳ್ಳಲು ಪ್ರಕ್ರಿಯೆಗಳು ನಡೆಯುತ್ತಿದ್ದು, ನಿಗದಿ ಶುಲ್ಕ, ಸ್ಟಾಂಪ್ ಡ್ಯೂಟಿ, ಬಿಡಿಎ ಗೆ ಹೆಚ್ಚುವರಿ ಹಣ ಪಾವತಿ ಮಾಡಲು ರೂ.2,10,550/– (ರೂಪಾಯಿ ಎರಡು ಲಕ್ಷದ ಹತ್ತು ಸಾವಿರದ ಐದನೂರ ಐವತ್ತು ಮಾತ್ರ) ಕಾರ್ಯಧ್ಯಕ್ಷರು, ಅ.ನ.ಕೃ. ಪ್ರತ್ರಿಷ್ಠಾನ, ವಿ.ಎಲ್.ಎಲ್, ನಿರ್ಮಾಣ್ ಭವನ್, ನಂ.71, ಕೃಷ್ಣರಾಜೇಂದ್ರ ರಸ್ತೆ, ಬಸವನಗುಡಿ, ಬೆಂಗಳೂರು ಇವರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ, ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

**ಷರತ್ತುಗಳು:**

1. ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಹಣ ಬೇಡಿಕೆಗೆ ಸ್ವೀಕೃತವಾದ ಪತ್ರವನ್ನು ಸಲ್ಲಿಸುವುದು.
2. ಇತರೆ ಖರ್ಚು ರೂ.41,230/– ಗಳಿಗೆ ವಿವರ ನೀಡುವುದು

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 4202–04–800–1–08–132 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2812 ಐಎಫ್(ಬಿ&ಎ) 2009 ದಿನಾಂಕ 16.11.2009 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2744 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 27 ಕಸನಿ 2009, ದಿನಾಂಕ 18.05.2009
2. ಸರ್ಕಾರಿ ಮುಖ್ಯ ಸಚೇತಕರು, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ ಸಮುಸ:ಕವಿಸ: 12:09, ದಿನಾಂಕ 06.06.2009
3. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಅವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–11/ಸಿಆರ್–7/2009 ಹಾಸನ ದಿನಾಂಕ 22.09.2009

**ಪ್ರಸ್ತಾವನೆ:**

ಮೇಲೆ(1) ರಲ್ಲಿ ಓದಲಾದ ದಿನಾಂಕ 18.05.2009ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಜಿಲ್ಲೆ ಇವರ ವಿರುದ್ಧ ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಹಾಸನ ರವರು ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7,13(1)(ಡಿ) ಜೊತೆಗೆ ಓದಲಾದ 13(2)ರ ಪ್ರಕಾರ ಹಾಸನ ಲೋಕಾಯುಕ್ತ ಪೊಲೀಸ್ ಠಾಣೆ ಮೊ.ನಂ. 07/2009 ರಲ್ಲಿ ಪ್ರಕರಣವನ್ನು ದಾಖಲು ಮಾಡಿದ್ದು ದಿನಾಂಕ 03.03.2009ರಂದು ಆಲೂರು ತಾಲ್ಲೂಕು, ಪಾಳ್ಯ ಹೋಬಳಿ ಕಾರ್ಜುಹಳ್ಳಿ ಗ್ರಾಮದಲ್ಲಿ ತೊಗಲುಗೊಂಬೆ ಪ್ರದರ್ಶನವನ್ನು ನಡೆಸಿ ಕೊಟ್ಟಿದ್ದು, ಶ್ರೀ ಕೆ.ಎನ್. ರಘು ಬಿನ್ ಎಸ್ ನಾಗರಾಜು ಅವರು ಶ್ರೀ ಮಂಜುನಾಥ ತೊಗಲು ಗೊಂಬೆ ಕಲಾಸಂಘದ ಕಾರ್ಯದರ್ಶಿಯಾಗಿದ್ದು, ಇದಕ್ಕಾಗಿ ಸರ್ಕಾರ ನೀಡುವ ರೂ. 10,000/–ಗಳ ಸಹಾಯ ಧನದ ಚೆಕ್ಕು ಕೊಡುವ ಸಂಬಂಧವಾಗಿ ಕಲಾವಿದರಿಂದ ರೂ.2,000/–ಗಳಿಗೆ ಒತ್ತಾಯಿಸಿ ರೂ.1,000/–ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಲಂಚದ ಹಣದ ಸಮೇತ ಲೋಕಾಯುಕ್ತ ಪೊಲೀಸ್‌ರವರು ಟ್ರ್ಯಾಪ್ ಮಾಡಿದ್ದು ಪರಿಶೀಲಿಸಲಾಗಿ, ರೂ.500/– ಮುಖಬೆಲೆಯ 1 ನೋಟು ಹಾಗೂ ರೂ.100 ಬೆಲೆಯ 5 ನೋಟುಗಳಿದ್ದು, ಒಟ್ಟು ರೂ.1,000 ಇದ್ದು, ನೋಟುಗಳ ನಂ. ಕ್ರಮವಾಗಿ ಕೆಳಗಿನಂತಿರುತ್ತದೆ. ರೂ.500/– ನೋಟಿನ ನಂ. 2EW525043, 100 ಬೆಲೆಯ 5 ನೋಟುಗಳಿದ್ದು 1) 4VD667751 2) IGQ969497 3) 8FL273984 4) 8FL273985 5) 8FL273986 ಗಳಾಗಿದ್ದು, ಇವರ ವಿರುದ್ಧ ಹೂಡಲಾಗಿರುವ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ)ರ ಜೊತೆಯಲ್ಲಿ ಓದಲಾದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)(iii)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (2) ರ ದಿನಾಂಕ 06.06.2009 ರ ಪತ್ರದಲ್ಲಿ ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಜಿಲ್ಲೆ ಇವರು ಪ್ರಸ್ತುತ ಅಮಾನತ್ತಿನಲಿದ್ದು, ಇವರ ಅಮಾನತ್ತಿನ ಆದೇಶವನ್ನು ರದ್ದು ಪಡಿಸಿ, ಅವರನ್ನು ಚಿಕ್ಕಮಗಳೂರಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಳೆದ 7 ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಶ್ರೀ ಎಂ. ಮಾದೇಗೌಡ ಇವರ ಜಾಗಕ್ಕೆ ವರ್ಗಾವಣೆ ಮಾಡಿಸಿಕೊಡುವಂತೆ ಶ್ರೀ ಡಿ.ಎನ್ ಜೀವರಾಜ್, ಸರ್ಕಾರಿ ಮುಖ್ಯ ಸಚೇತಕರು, ಕರ್ನಾಟಕ ವಿಧಾನಸಭೆ, ಶ್ರೀ ಸಿ.ಟಿ ರವಿ ಶಾಸಕರು, ಚಿಕ್ಕಮಗಳೂರು ವಿಧಾನಸಭಾ ಕ್ಷೇತ್ರ, ಶ್ರೀ ಎಂ.ಪಿ.ಕುಮಾರಸ್ವಾಮಿ, ಮೂಡಿಗೆರೆ ವಿಧಾನಸಭೆ ಕ್ಷೇತ್ರ, ಶ್ರೀ ಡಿ.ಎನ್ ಸುರೇಶ್, ಶಾಸಕರು, ತರೀಕೆರೆ ವಿಧಾನಸಭೆ ಕ್ಷೇತ್ರ ರವರು ಮಾನ್ಯಮುಖ್ಯಮಂತ್ರಿಯವರನ್ನು ಕೋರಿರುತ್ತಾರೆ. ಮಾನ್ಯ ಮುಖ್ಯಮಂತ್ರಿಯವರು ಕೂಡಲೇ ಕಡತದಲ್ಲಿ ಮಂಡಿಸಿ ಎಂದು ಆದೇಶಿಸಿರುತ್ತಾರೆ.

ಈ ಸಂಬಂಧವಾಗಿ ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಜಿಲ್ಲೆ ಇವರ ಅಮಾನತ್ತನ್ನು ತೆರವುಗೊಳಿಸುವ ವಿಷಯದಲ್ಲಿ ಲೋಕಾಯುಕ್ತದ ವರದಿಯನ್ನು ಕೋರಲಾಗಿತ್ತು. ಮೇಲೆ ಓದಲಾದ ದಿನಾಂಕ 22.09.2009 ರ ಪತ್ರದಲ್ಲಿ ಅಪರ ಪೋಲಿಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಆರೋಪಿತರಾದ ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಜಿಲ್ಲೆ ಇವರ ಅಮಾನತ್ತನ್ನು ತೆರವುಗೊಳಿಸುವ ವಿಚಾರದಲ್ಲಿ ಸರ್ಕಾರವು ಸೂಕ್ತ ಎನಿಸಿದ ಕ್ರಮ ತೆಗೆದುಕೊಳ್ಳಬಹುದಾಗಿದೆ ಎಂದು ವರದಿ ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಎಂ.ಎಸ್. ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಜಿಲ್ಲೆ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತು ಆದೇಶವನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ, ಚಿಕ್ಕಮಗಳೂರಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಂ.ಮಾದೇಗೌಡ ಇವರ ಸ್ಥಳಕ್ಕೆ ನಿಯುಕ್ತಿಗೊಳಿಸಲು ಸರ್ಕಾರವು ತೀರ್ಮಾನಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 27 ಕಸನಿ 2009 ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್ 2009 (1)**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎಸ್, ಚಂದ್ರಪ್ಪ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಹಾಸನ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಇವರ ಅಮಾನತ್ತನ್ನು ತೆರವುಗೊಳಿಸಿ, ಚಿಕ್ಕಮಗಳೂರು ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಿರುವ ಶ್ರೀ ಎಂ.ಮಾದೇಗೌಡ ಇವರ ಸ್ಥಳಕ್ಕೆ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2745

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಶಿಕ್ಷಣ ಸಚಿವಾಲಯ

**ವಿಷಯ:** ಹಾವೇರಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯ ಕಟ್ಟಡದ ಬಾಡಿಗೆಗೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಇಡಿ 60 ಟಿಇಸಿ 2000(2) ದಿನಾಂಕ: 12–7–2007.

2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇವರ ಪತ್ರ ಸಂಖ್ಯೆ ಡಿಟಿಇ 29 ಬಿಎಲ್‌ಡಿ 2008 ದಿನಾಂಕ:4.8.2009.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಹಾವೇರಿ ಪಟ್ಟಣದಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–2008ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

2) ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಯವರು ಹಾವೇರಿ ಜಿಲ್ಲೆ ಹಾವೇರಿಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ವಿದ್ಯಾರ್ಥಿಗಳು ಪ್ರವೇಶವನ್ನು ಪಡೆದಿದ್ದು ಪಾಠಪ್ರವಚನಗಳು ಆರಂಭವಾಗಿರುತ್ತದೆ. ಸದರಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯಕ್ಕೆ ಕಟ್ಟಡದ ಅಭಾವಿರುವುದರಿಂದ ಹಾಗೂ ಸರ್ಕಾರಿ ಕಟ್ಟಡ ಲಭ್ಯವಿಲ್ಲದೆ. ಇರುವುದರಿಂದ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯಕ್ಕಾಗಿ (ವಿದ್ಯಾರ್ಥಿನಿಯರಿಗೆ ಮಾತ್ರ) ಶ್ರೀ ಬಸವರಾಜಪ್ಪ ಗುರುರಾಯಪ್ಪ ತಾಂಡೂರು ಸಾ.ಹಾವೇರಿ ಇವರ ಖಾಸಗಿ ಕಟ್ಟಡವನ್ನು ಗುರ್ತಿಸಿ ಲೋಕೋಪಯೋಗಿ ಇಲಾಖಾ ವತಿಯಿಂದ ನಿಗದಿಪಡಿಸಿರುವ ಕಟ್ಟದ ಬಾಡಿಗೆ ಮಾಸಿಕ ರೂ. 54,500–00 (ಐವತ್ತು ನಾಲ್ಕು ಸಾವಿರದ ಐನ್ನೂರು ರೂಪಾಯಿಗಳು ಮಾತ್ರ) ರಂತೆ ಪಾವತಿ ಮಾಡುವ ಷರತ್ತಿಗೊಳಪಟ್ಟು ಮೇಲ್ಕಂಡ ಕಟ್ಟಡವನ್ನು ಬಾಡಿಗೆ ಪಡೆಯಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ. ಸದರಿ ಬಾಡಿಗೆಯನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2203–00–112–0–02–059 ಯೋಜನೆ ಅಡಿಯಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ.

3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 322 ಯೋಯೋಕ 2009, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2009**

4) ಹಾವೇರಿ ಜಿಲ್ಲೆ ಹಾವೇರಿಯಲ್ಲಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯಕ್ಕೆ 2009–10ನೇ ಸಾಲಿಗೆ ದಿನಾಂಕ: 31–03–2010ರವರೆಗೆ ಶ್ರೀ ಬಸವರಾಜಪ್ಪ ಗುರುರಾಯಪ್ಪ ತಾಂಡೂರು ಸಾ.ಹಾವೇರಿ ಇವರ ಖಾಸಗಿ ಕಟ್ಟಡವನ್ನು ಮಾಸಿಕ ರೂ. 54.500–00 ಗಳಂತೆ (ರೂ ಐವತ್ತಾ ನಾಲ್ಕು ಸಾವಿರದ ಐನೂರು ಮಾತ್ರ) ಬಾಡಿಗೆ ಆಧಾರದ ಮೇಲೆ ಪಡೆಯಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮತಿ ನೀಡಿದೆ.

5) ಸದರಿ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2203–00–112–0–02–059 ಯೋಜನೆ ಅಡಿ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸತಕ್ಕದ್ದು.

**ಷರತ್ತುಗಳು:**

* ದಿ: 1–4–2009ರಿಂದ ಅನ್ವಯವಾಗುವಂತೆ ಲೋಕೋಪಯೋಗಿ ಇಲಾಖೆ ನಿಗದಿಪಡಿಸಿರುವ ದರಗಳಲ್ಲಿ ಬಾಡಿಗೆ ನಿಗದಿಪಡಿಸತಕ್ಕದ್ದು.
* ಸದರಿ ಬಾಡಿಗೆಯನ್ನು ಡಿ.ಸಿ.ಬಿಲ್ಲಿನ ಮೂಲಕ ಡ್ರಾ ಮಾಡಿ ಕಟ್ಟಡದ ಬಾಡಿಗೆ ಪಾವತಿಸತಕ್ಕದ್ದು.
* ಆದೇಶ ನೀಡಿದ ನಂತರ ಆಯಾ ತಿಂಗಳ ಬಾಡಿಗೆಯನ್ನು ಡಿ.ಸಿ.ಬಿಲ್ಲಿನ ಮುಖಾಂತರ ಡ್ರಾ ಮಾಡಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯಕ್ಕಾಗಿ ಸ್ವಂತ ಕಟ್ಟಡ ನಿರ್ಮಾಣ ಮಡುವವರೆಗೆ ಅಥವಾ ಸದರಿ ಕಟ್ಟಡಕ್ಕಿಂತ ಕಡಿಮೆ ಬಾಡಿಗೆಯಲ್ಲಿ ಬೇರೆ ಸೂಕ್ತವಾದ ಕಟ್ಟಡ ದೊರೆತು ಸದರಿ ಕಟ್ಟಡವನ್ನು ತೆರವು ಮಾಡಿದ ದಿನದವರೆಗೆ ಮಾಲೀಕರಿಗೆ ಬಾಡಿಗೆ ಪಾವತಿಸತಕ್ಕದ್ದು.

6) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಶಿಇ 2172 ಐಎಫ್ (ಬಿ ಮತ್ತು ಎ) 2009 ದಿನಾಂಕ: 1.9.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2634

**ಎಸ್.ಎಂ. ನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಯೋಜನೆ)

## PUBLIC WORKS, PORTS AND INLAND WATER TRANSPORT SECRETARIAT

**Sub:** State Policy for SEZs 2009 reg.

**Read:** 1) Government order No. CI 114 SPI 2007, dated 28-02-2009.

2) U.O. Note NO. CI 114 SPI 2007, dated 02-03-2009.

**Preamble:**

In Government order dated: 28-02-2009 read (1) above Government has announced State Poicy for Special Economic Zones 2009 in order to support and encourage development of SEZ by Public, private or Joint Sectors or by the state Government or its agencies in the State. "As discussed in 1st Monitoring and Review Commmittee Metting of SEZs held on 7-7-2009 under the Chairmanship of Chief Secretary a general order is issued for the time being in respect of minor ports and in respect ofcase to case basis orders will be issued separatelt if necessary".

Under clause III para(3) (iv) the following are approved in the state policy for SEZs 2009 with regard to Minor ports and related services:

1) Subject to the Policy laid down by the Government regarding ports, the development/Co-developer or his agent may develop, operate and maintain a minor port within the Zone, for landing of goods for use in the Zone and for the shipping of goods form the Zone.

2) The Developer/ Co-developer or his agent will manage for landing of other cargoes (not meant for the Zone) as per terms and conditions prescribed by the regulations of the State Government.

3) The Developer/Co-developer or his agent may fix collect tariff form the vessels entering in the minor port within the Zone and on the goods landed and shipped at the port in accordance with the directions of the State Government.

The principal Secretary to Government, Commerce & industries Department vide U.O. Note read(2) above has requested public works, ports and Inland Water Transport Department to issue Concurrent notifications and regulations of State Government on the above said proposal. Hence this order.

**Government Order NO.PWD 55 PSP 2009, Bangalore, Dated: 16th November 2009**

In the Circumstances explained in the preamble, Government is pleased to announce as follows in respect of Minor port and related services.

1. Subject to the policy laid down by the government regarding ports, the developer/Co-developer or his agent may develop operate and maintain a minor port within the Zone, for landing of goods for use in the Zone and for the shipping of goods from the Zone.

2. The DeveloperCo-developer or his agent will mange for landing of other cargoes (not meant for the Zone) as per terms and conditions prescribed by the regulations of the State Government.

3. The Developer/Co-developer or his agent may fix collect tariff form the vessels entering in the minor port within the Zone and on the goods landed and shipped at the port in accordance with the directions of the State Government.

By order and in name of the Governor of Karnataka

**N.S. VISHWANATH**

P.R. 2635 Under Secreatry to Government,

Public Works, Ports and Inland Water Transport Department (Ports)

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಲೋಕೋಪಯೋಗಿ ಇಲಾಖೆಯ 'ಸಹಾಯಕ ಇಂಜಿನಿಯರ್' ಪದನಾಮವನ್ನು "ಸಹಾಯಕ ಇಂಜಿನಿಯರ್ (ವಿಭಾಗ–1)" ಎಂದು ಪುನರ್ ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ ಲೋಇ 176 ಸೇಎಸು 2009, ದಿನಾಂಕ: 11–9–2009.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಲೋಕೋಪಯೋಗಿ ಇಲಾಖೆಯ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಯನ್ನು ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯನ್ನು ಕಾಯ್ದಿರಿಸಿ "ಸಹಾಯಕ ಇಂಜಿನಿಯರ್ (ವಿಭಾಗ–II)" ಎಂದು ಪುನರ್ ಪದನಾಮೀಕರಿಸಿ ಆದೇಶಿಸಲಾಗಿದೆ.

ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸಹಾಯಕ ಇಂಜಿನಿಯರ್ ಮತ್ತು ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಎಂಬ ಪದನಾಮಗಳಿದ್ದು, ಉಲ್ಲೇಖಿತ ಅಧಿಸೂಚನೆಯಲ್ಲಿ 'ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)' ಪದನಾಮವನ್ನು 'ಸಹಾಯಕ ಇಂಜಿನಿಯರ್ (ವಿಭಾಗ–II) ಎಂದು ಪುನರ್ ಪದನಾಮೀಕರಿಸಿರುವುದರಿಂದ, 'ಸಹಾಯಕ ಇಂಜಿನಿಯರ್ ಪದನಾಮವನ್ನು ಸಹ ಪುನರ್‌ಪದನಾಮೀಕರಿಸಬೇಕಾಗುತ್ತದೆ. ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಮತ್ತು ಸಹಾಯಕ ಇಂಜಿನಿಯರ್ ಇವೆರಡೂ ವೃಂದಗಳ ವೇತನ ಶ್ರೇಣಿ ಕರ್ತವ್ಯ ಹಾಗೂ ಜವಾಬ್ದಾರಿಗಳು ಒಂದೇ ಇರುವುದರಿಂದ ಹಾಗೂ ಲೋಕೋಪಯೋಗಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿ ಪ್ರಸ್ತಾವನೆಯು ಪರಿಶೀಲನೆಯಲ್ಲಿದ್ದು ಈ ಪ್ರಕ್ರಿಯೆಗೆ ಇನ್ನಷ್ಟು ಕಾಲಾವಕಾಶ ಅಗತ್ಯವಿರುವುದರಿಂದ, ಕಾರ್ಯಕಾರಿ ಆದೇಶವನ್ನು ಹೊರಡಿಸುವ ಅಗತ್ಯವಿರುವುದನ್ನು ಮನಗಂಡು, ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯನ್ನು ಕಾಯ್ದಿರಿಸಿ ಕಾರ್ಯಕಾರಿ ಆದೇಶವನ್ನು ಹೊರಡಿಸುವುದು ಅವಶ್ಯಕವಾಗಿರುತ್ತದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 176 ಸೇಎಸು 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಲೋಕೋಪಯೋಗಿ ಇಲಾಖೆಯ 'ಸಹಾಯಕ ಇಂಜಿನಿಯರ್' ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಯನ್ನು ಕಾಯ್ದಿರಿಸಿ "ಸಹಾಯಕ ಇಂಜಿನಿಯರ್ (ವಿಭಾಗ–I)" ಎಂದು ಪುನರ್ ಪದನಾಮೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಸಿ. ರಾಜಪ್ಪ**

ಪಿ.ಆರ್. 2636 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ)

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತದಲ್ಲಿನ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನೆ ಕೋಶದ ಕಾರ್ಯನಿರ್ವಹಣೆಗಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 22–04–2002.
2) ಸರ್ಕಾರದ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 25–11–2002.
3) ಸರ್ಕಾರದ ಆದೇಶ ಸಂಖ್ಯೆ: ಮೂಅಇ 7 ರಾಅವಿ 2002, ದಿನಾಂಕ: 20–02–2003.
4) ಸರ್ಕಾರದ ಆದೇಶ ಸಂಖ್ಯೆ: ಮೂಅಇ 18 ರಾಅವಿ 2003, ದಿನಾಂಕ: 28–05–2003.
5) ಸರ್ಕಾರದ ಆದೇಶ ಸಂಖ್ಯೆ: ಮೂಅಇ 147 ಮೂಇವಿ 2005, ದಿನಾಂಕ: 18–04–2006.
6) ಸರ್ಕಾರದ ಆದೇಶ ಸಂ: ಮೂಅಇ 18 ರಾಅವಿ 2003, ದಿನಾಂಕ: 09–01–2007.
7) ಸರ್ಕಾರದ ಆದೇಶ ಸಂ: ಮೂಅಇ 169 ರಾಅವಿ 2008, ದಿನಾಂಕ: 18–12–2008.
8) ಉಪ ಪ್ರಧಾನ ವ್ಯವಸ್ಥಾಪಕರು, ಕೆ.ಎಸ್.ಐ.ಐ.ಡಿ.ಸಿ ಇವರ ಪತ್ರ ಸಂ.DGM (IPD) 1839/2009–10 ದಿನಾಂಕ: 22–10–2009.

**ಪ್ರಸ್ತಾವನೆ:**

ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನೆ ಜಾರಿಗೆ ಸಂಬಂಧಿಸಿದ ವಿಷಯಗಳನ್ನು ನಿರ್ವಹಿಸಲು ಮೇಲೆ ಕ್ರಮ ಸಂ. (1)ರ ದಿನಾಂಕ: 22-04-2002ರ ಆದೇಶದನ್ವಯ ಯೋಜನೆಯ ನೋಡಲ್ ಏಜೆನ್ಸಿಯಾದ ಕೆ.ಎಸ್.ಐ.ಐ.ಡಿ.ಸಿ.ಯಲ್ಲಿ ಬಿ.ಐ.ಎ.ಪಿ ಕೋಶವನ್ನು ಸೃಜಿಸಲಾಯಿತು.

2. ಉಲ್ಲೇಖ (5)ರಲ್ಲಿನ ಆದೇಶದಲ್ಲಿ 2006–07ನೇ ಸಾಲಿನ ಆರ್ಥಿಕ ವರ್ಷದಲ್ಲಿ ಈ ಯೋಜನೆಯನ್ನು ಮಂದುವರೆದ ಯೋಜನೆಯೆಂದು ಪರಿಗಣಿಸಿ ಮಂಜೂರಾತಿಯನ್ನು ನೀಡಲಾಗಿದೆ.

3. ಸದರಿ ಕೋಶದ ಕಾರ್ಯನಿರ್ವಹಣೆಗಾಗಿ ಸರ್ಕಾರವು ಕಾಲಕಾಲಕ್ಕೆ ಮೇಲೆ ಹೇಳಿದ (2)ರಿಂದ (4) ಮತ್ತು (6),(7)ರಲ್ಲಿರುವ ಆದೇಶಗಳಲ್ಲಿ ಹಣವನ್ನು ಬಿಡುಗಡೆ ಮಾಡಿದೆ.

4. ಕೆ.ಎಸ್.ಐ.ಐ.ಡಿ.ಸಿ.ಯು ಉಲ್ಲೇಖ (8)ರಲ್ಲಿನ ತನ್ನ ಪತ್ರದಲ್ಲಿ ಬಿ.ಐ.ಎ.ಪಿ ಕೋಶದ ವೆಚ್ಚವನ್ನು ಭರಿಸಲು ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತದೆ. ಈ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 124 ರಾಅವಿ 2009, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ಕೆ.ಎಸ್.ಐ.ಐ.ಡಿ.ಸಿ.ಯಲ್ಲಿರುವ ಬಿ.ಐ.ಎ.ಪಿ ಕೋಶದ ಕಾರ್ಯನಿರ್ವಹಣೆಗಾಗಿ 2009–10ನೇ ಆರ್ಥಿಕ ವರ್ಷದಲ್ಲಿ ರೂ.25.00ಲಕ್ಷಗಳನ್ನು (ಇಪ್ಪತ್ತೈದು ಲಕ್ಷರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–2–03 ಕೆ.ಎಸ್.ಐ.ಐ.ಡಿ.ಸಿ.–ಬಿ.ಐ.ಎ.ಪಿ ಕೋಶ–211–ಹೂಡಿಕೆಗಳು ಇದರಲ್ಲಿ ಈ ಸಾಲಿಗೆ ಒದಗಿಸಿದ ಮೊತ್ತದಿಂದ ಭರಿಸತಕ್ಕದ್ದು.

3. ಸದರಿ ಮೊತ್ತದ ವೆಚ್ಚದ ವಿವರಗಳನ್ನು ಒಳಗೊಂಡ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು ಹಾಗೂ ಈ ಕೋಶದ ರಚನೆಯ ದಿನಾಂಕದಿಂದ ಈ ವರೆವಿಗೂ ಮಾಡಿರುವ ವೆಚ್ಚಗಳ ವಿವರಗಳನ್ನು ಸರ್ಕಾರಕ್ಕೆ ಒದಗಿಸುವ ಷರತ್ತಿಗೆ ಒಳಪಟ್ಟು ಈ ಹಣವನ್ನು ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಐ.ಐ.ಡಿ.ಸಿ ಇವರು ಈ ಮೊತ್ತವನ್ನು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಸರ್ಕಾರ ಆದೇಶ ಸಂ. FD 1 TFP 2008 ದಿನಾಂಕ: 16–05–2008ರಲ್ಲಿ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿತ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2637

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ವಿಷಯ:** ಮಂಗಳೂರು ವಿಮಾನ ನಿಲ್ದಾಣ ವಿಸ್ತರಣೆಗಾಗಿ 2ನೇ ಹಂತದಲ್ಲಿ ಹೆಚ್ಚುವರಿ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಕೊಳಂಬೆ ಮತ್ತು ಮಂಗಳೂರು ಕಾಲನಿಗಳಲ್ಲಿ ಒದಗಿಸುವ ಮೂಲಸೌಲಭ್ಯ ಕಾಮಗಾರಿಗಳಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1) ಜಿಲ್ಲಾಧಿಕಾರಿಗಳು. ದಕ್ಷಿಣ ಕನ್ನಡ ಇವರ ಕಛೇರಿ ಪತ್ರ ಸಂ.ಎಲ್.ಎಕ್ಯೂ.ಸಿ.ಆರ್. 61/02–03 ದಿನಾಂಕ: 1–1–05
2) ಸರ್ಕಾರದ ಆದೇಶ ಸಂ: ಮೂಅಇ 46 ರಾಅವಿ 04, ದಿನಾಂಕ: 31–5–05.
3) ಸರ್ಕಾರದ ಆದೇಶ ಸಂ: ಮೂಅಇ 46 ರಾಅವಿ 04, ದಿನಾಂಕ: 30–09–05.
4) ಜಿಲ್ಲಾಧಿಕಾರಿಗಳು. ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂ.ಎಲ್.ಎ.ಕ್ಯೂ.ಸಿಆರ್. 134/05–06 ದಿನಾಂಕ: 12–12–06
5) ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂ.ಎಲ್.ಎ.ಕ್ಯೂ.ಇತರೆಸಿಆರ್. 99/05–06 ದಿನಾಂಕ: 3–7–09
6) ಸರ್ಕಾರದ ಆದೇಶ ಸಂ: ಮೂಅಇ 2 ರಾಅವಿ 08, ದಿನಾಂಕ: 3–8–09.
7) ಜಿಲ್ಲಾಧಿಕಾರಿಗಳು. ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂ.ಎಲ್.ಎ.ಕ್ಯೂ.ಸಿಆರ್. 99/05–06 ದಿನಾಂಕ: 28 10–09
8) ಜಿಲ್ಲಾಧಿಕಾರಿಗಳು. ದಕ್ಷಿಣ ಕನ್ನಡ ಜಿಲ್ಲೆ, ಇವರ ಪತ್ರ ಸಂ.ಎಲ್.ಎ.ಕ್ಯೂ.ಸಿಆರ್. 99/05–06 ದಿನಾಂಕ: 4–11–09

**ಪ್ರಸ್ತಾವನೆ:**

ಮಂಗಳೂರು ವಿಮಾನ ನಿಲ್ದಾಣ ಅಭಿವೃದ್ಧಿಗೆ ಅಗತ್ಯವಾದ ಹೆಚ್ಚುವರಿ ಭೂಮಿಯ ಸ್ವಾಧೀನಕ್ಕೆ ಹಾಗೂ ಸಂತ್ರಸ್ತರ ಕುಟುಂಬದ ಪುನರ್ವಸತಿಗೆ ರೂ. 1078.659 ಲಕ್ಷಗಳ ಬಿಡುಗಡೆಗಾಗಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ಮೇಲೆ ಓದಲಾದ ಕ್ರಮ ಸಂ.(1)ರ ದಿನಾಂಕ: 1–1–05ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಉದ್ದೇಶಕ್ಕಾಗಿ ಕ್ರಮ ಸಂ. (2)ರ ದಿನಾಂಕ: 31–5–05ರ ಸರ್ಕಾರಿ ಆದೇಶವನ್ನು ರೂ.3.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ನಂತರ ಕ್ರಮ ಸಂ.3 ರ ದಿನಾಂಕ: 30–09–2005ರ ಸರ್ಕಾರಿ ಆದೇಶದಲ್ಲಿ ಬಾಕಿ ಮೊತ್ತ ರೂ. 780.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ ಹೀಗಾಗಿ ಭೂ ಸ್ವಾಧೀನ ಹಾಗೂ ಪುರ್ನವಸತಿ ಕಾಮಗಾರಿಗಳಿಗಾಗಿ ಸಂಪೂರ್ಣ ಮೊತ್ತ ರೂ. 10.80 ಕೋಟಿಗಳು ಬಿಡುಗಡೆಯಾಗಿರುತ್ತದೆ. ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರು ಕ್ರಮ ಸಂ.(4)ರಲ್ಲಿ ಓದಲಾದ ದಿನಾಂಕ:12–12–06ರ ಪತ್ರದಲ್ಲಿ ಸಲ್ಲಿಸಿದ ಉಪಯೋಗಿತ ಪ್ರಮಾಣ ಪತ್ರದಲ್ಲಿ ಮಂಗಳೂರು ವಿಮಾನ ನಿಲ್ದಾಣ ಅಭಿವೃದ್ದಿಗಾಗಿ ಬಿಡುಗಡೆಯಾಗಿರುವ ಒಟ್ಟು ಮೊತ್ತ ರೂ.10.80 ಕೋಟಿಗಳ ಪೈಕಿ ರೂ.991.34 ಲಕ್ಷಗಳು ಬಳಕೆಯಾಗಿ ರೂ.88.659 ಲಕ್ಷಗಳು ಬಾಕಿ ಉಳಿದಿರುತ್ತದೆ ಎಂದು ವರದಿ ಮಾಡಲಾಗಿದೆ.

2. ಮೇಲೆ ಕ್ರಮ ಸಂ.(5)ರಲ್ಲಿ ಓದಲಾದ ದಿನಾಂಕ: 3–7–09ರಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ಮಂಗಳೂರು ವಿಮಾನ ನಿಲ್ದಾಣದ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಪುನರ್‌ವಸತಿ ಕಾಲೋನಿಯಲ್ಲಿ ಕುಡಿಯುವ ನೀರಿನ ಸರಬರಾಜು ವ್ಯವಸ್ಥೆಗೆ ಅಂದಾಜು ವೆಚ್ಚ ರೂ. 10.10 ಲಕ್ಷಗಳ ಬಿಡುಗಡೆಗಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಗಣಿಸಿ ಕ್ರಮ ಸಂ. (6)ಸರ್ಕಾರಿ ಆದೇಶ ದಿನಾಂಕ 3–8–09ರಲ್ಲಿ ರೂ.10.10 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

3. ಮೇಲೆ ಕ್ರಮ ಸಂ.(7)ರಲ್ಲಿ ಓದಲಾದ ದಿನಾಂಕ: 28–10–09ರಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರು ಮಂಗಳೂರು ವಿಮಾನ ನಿಲ್ದಾಣದ ಭೂಸ್ವಾಧೀನತೆಯಿಂದ ನಿರ್ವಸಿತರಾದ ಕುಟುಂಬಗಳಿಗೆ ಅಭಿವೃದ್ಧಿ ಪಡಿಸುತ್ತಿರುವ 2 ಪುನರ್‌ವಸತಿ ಕಾಲೋನಿಗಳಲ್ಲಿ ರಸ್ತೆ, ಬೀದಿ ದೀಪಗಳು, ಸಮುದಾಯ ಭವನ, ಕುಡಿಯುವ ನೀರಿನ ವ್ಯವಸ್ಥೆ ಇತ್ಯಾದಿಗಳ ನಿರ್ಮಾಣಕ್ಕಾಗಿ ತಗಲುವ ವೆಚ್ಚ ರೂ. 31,00,000/–ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಈ ಮಧ್ಯೆ ಮೇಲೆ ಉಲ್ಲೇಖ 8ರಲ್ಲಿ ಓದಲಾದ ಪತ್ರ ದಿನಾಂಕ: 4–11–09ರಲ್ಲಿ ಜಿಲ್ಲಾಧಿಕಾರಿಗಳು ಪರಿಷ್ಕೃತ ಪ್ರಸ್ತಾವನೆ ಸಲ್ಲಿಸಿ ಭೂಮಿ ಸಮತಟ್ಟು ಮಾಡಲು ಹಾಗೂ ಕಾಂಪೌಂಡ್ ಗೋಡೆ ನಿರ್ಮಾಣವನ್ನು ಸೇರಿಸಿ ರೂ. 33,50,000/–ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ

4. ಮೇಲಿನ ಪ್ರಸ್ತಾವನೆಯಲ್ಲಿ ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 2 ರಾಅವಿ2008, ಬೆಂಗಳೂರು, ದಿನಾಂಕ: 10ನೇ ನವೆಂಬರ್ 2009**

1. ಸರ್ಕಾರ ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಮಂಗಳೂರು ವಿಮಾನ ನಿಲ್ದಾಣ ವಿಸ್ತರಣೆಗಾಗಿ 2ನೇ ಹಂತದಲ್ಲಿ ಹೆಚ್ಚುವರಿ ಭೂಸ್ವಾಧೀನತೆಯಿಂದ ನಿರ್ವಸಿತರಾದವರಿಗೆ ಮಳವೂರು ಮತ್ತು ಕೊಳಂಬೆಯಲ್ಲಿ ನಿರ್ಮಿಸಲಾದ ಪುನರ್ ವಸತಿ ಕಾಲೋನಿಯಲ್ಲಿ ಮೂಲಭೂತ ಸೌಲಭ್ಯ ಒದಗಿಸಲು ಅವಶ್ಯವಿರುವ ಅನುದಾನದ ಕೊನೆಯ ಕಂತಾಗಿ ರೂ.33.50 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಇನ್ನು ಮುಂದೆ ಈ ಪುನರ್ವಸತಿ ಕಾಲೋನಿಗಳ ನಿರ್ವಹಣೆಯ ಜವಾಬ್ದಾರಿಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್/ತಾಲ್ಲೂಕು ಪಂಚಾಯತ್ ವಹಿಸಿಕೊಳ್ಳತಕ್ಕದ್ದು.

2. ಈ ಪುನರ್ವಸತಿ ಕಾಮಗಾರಿಗಳನ್ನು ತಕ್ಷಣ ಕಾರ್ಯಗತಗೊಳಿಸಿ ಇಲ್ಲಿಯವರೆಗೆ ಬಿಡುಗಡೆ ಮಾಡಿದ ಮೊತ್ತವೂ ಸೇರಿದಂತೆ ಉಪಯೋಗಿತ ಪ್ರಮಾಣ ಪತ್ರ ಸಲ್ಲಿಸುವಂತೆ ಸೂಚಿಸಿದೆ.

3. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–1–05–ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ (ಯೋಜನೆ)–211 ಬಂಡವಾಳ ಇದರಡಿಯಲ್ಲಿ ಭರಿಸಲಾಗುವುದು.

4. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಇವರು ಪೇಯಿಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

5. ಈ ಆದೇಶವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ನೀಡಲಾದ ಆರ್ಥಿಕ ಅಧಿಕಾರದ ಆದೇಶ ಸಂ. FD 1 TFP 08 ದಿನಾಂಕ: 16–5–08ರ ಅನುಸಾರ ಹೊರಡಿಸಿದೆ.

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2638 **ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 'ಬೆಂಗಳೂರು ಐ.ಟಿ,ಬಿಜ್–2009' ಕಾರ್ಯಕ್ರಮದ ಅಂಗವಾಗಿ ಏರ್ಪಡಿಸಲಾಗಿರುವ ಮಾಹಿತಿ ತಂತ್ರಜ್ಞಾನದಲ್ಲಿ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮಕ್ಕೆ ಅನುದಾನ ಬಿಡುಗಡೆ ಬಗ್ಗೆ– ರಾಯಚೂರು ಜಿಲ್ಲೆಗೆ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಮಾತಂಇ 29 ಅಚವಿ 2009, ದಿನಾಂಕ: 24–09–2009.

2) ಉಪ ನಿರ್ದೇಶಕರು, (ಆ) ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಇವರ ಪತ್ರ ಸಂಖ್ಯೆ ಸಿವಿ3/ವಿ. ಅಂತರಜಾಲ ಪ್ರಪಂಚ 20–2009–10, ದಿನಾಂಕ: 07–11–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009ನೇ ಸಾಲಿನಲ್ಲಿ ಹಮ್ಮಿಕೊಳ್ಳಲಾದ **'ಬೆಂಗಳೂರು ಐ.ಟಿ.ಬಿಜ್–2009ರ' ಮೇಳದ ಅಂಗವಾಗಿ** ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ ಕಾರ್ಯಕ್ರಮವನ್ನು ನಡೆಸಲು ಪ್ರತಿ ಜಿಲ್ಲೆಗೆ ರೂ. 1.00 ಲಕ್ಷದಂತೆ ರಾಜ್ಯದ ಎಲ್ಲಾ 29 ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲು ಒಟ್ಟು ರೂ.29,00,000/– ಗಳ (ಇಪ್ಪತ್ತೊಂಬತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ.

ಮೇಲೆ ಓದಲಾದ (2) ಉಪ ನಿರ್ದೇಶಕರು, (ಆ) ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು. ಇವರ ಪತ್ರದಲ್ಲಿ ವಿದ್ಯಾರ್ಥಿಗಳ ಅಂತರ್ಜಾಲ ಪ್ರಪಂಚ 2009ರ ಕಾರ್ಯಕ್ರಮವನ್ನು ರಾಯಚೂರು ಜಿಲ್ಲೆಯಲ್ಲಿ ಕೂಡ ಹಮ್ಮಿಕೊಳ್ಳಲಾಗಿದೆ. ಎಂದು ತಿಳಿಸುತ್ತಾ, ಜಿಲ್ಲೆಯ ವ್ಯಾಪಕ ಮಳೆ ಮತ್ತು ನೆರೆ ಹಾವಳಿಯಿಂದ ಸ್ಥಳೀಯ ಆರ್ಥಿಕ ನೆರವು ದೊರೆಯುವುದು ದುರ್ಲಬವಾಗಿದೆಯೆಂದು ತಿಳಿಸುತ್ತಾ ಸದರಿ ಕಾರ್ಯಕ್ರಮದ ಯಶಸ್ವಿ ನಿರ್ವಹಣೆಗಾಗಿ ಈಗ ಒದಗಿಸಿರುವ ರೂ.1.00 ಲಕ್ಷ ಅನುದಾನದ ಜೊತೆಗೆ ಹೆಚ್ಚುವರಿಯಾಗಿ ಇನ್ನೂ ರೂ. 1.00 ಲಕ್ಷ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಮಾತಂಇ 29 ಅಚವಿ 2009, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು **'ಬೆಂಗಳೂರು ಐ.ಟಿ.ಬಿಜ್–2009ರ'** ಕಾರ್ಯಕ್ರಮದ ಅಂಗವಾಗಿ ರಾಯಚೂರು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು (ಆ) ರವರ ಕೋರಿಕೆಯಂತೆ ಈಗಾಗಲೇ ಬಿಡುಗಡೆಗೊಳಿಸಲಾದ ರೂ. ಒಂದು ಲಕ್ಷದ ಅನುದಾನದ ಜೊತೆಗೆ ಹೆಚ್ಚುವರಿಯಾಗಿ ರೂ. 1.00 ಲಕ್ಷಗಳ (ಒಂದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ **"3451–00–090–2–01 ಮಾಹಿತಿ ತಂತ್ರಜ್ಞಾನ ಉನ್ನತೀಕರಣ ಮತ್ತು ಅಭಿವೃದ್ಧಿ – 059 – ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ** ಒದಗಣೆ ಮಾಡಲಾದ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇವರು ಈ ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಢೀಕರಣ ಪತ್ರವನ್ನು ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರಿಂದ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16–05–2008, ಇದರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2643

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ:** ದಿನಾಂಕ: 31-03–2009 ರೊಳಗೆ ನಡೆಸಬೇಕಾಗಿರುವ ದಿ ಬಿನ್ನಿಮಿಲ್ಸ್ ಲೇಬರ್ ಅಸೋಸಿಸೇಷನ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಒ47 ಸಿಎಲ್ಎಂ 2009, ದಿನಾಂಕ: 04–03–2009.

2) ಸರ್ಕಾರದ ಆದೇಶ ಸಂಖ್ಯೆ: ಸಿಒ47 ಸಿಎಲ್ಎಂ 2009, ದಿನಾಂಕ: 13–05–2009.

3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಹೆಚ್ಎಸ್‌ಜಿ 2:126 ಹೆಚ್‌ಹೆಚ್ಎಸ್: 2009–10 ದಿನಾಂಕ:23–09–2009.

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ ಸಿಒ 47 ಸಿಎಲ್ಎಂ 2009, ದಿನಾಂಕ: 04–3–2009ರ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಳಗೆ ಮತ್ತು ಆ ಅನುಕ್ರಮದಲ್ಲಿ 2009–10ರಿಂದ ಐದು ವರ್ಷದ ಅವಧಿಗೆ ಆಡಳಿತ ಸಮಿತಿಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳಿಗೆ ಚುನಾವಣೆಯನ್ನು ನಡೆಸತಕ್ಕದ್ದೆಂದು ಆದರೆ, ದಿನಾಂಕ: 04–03–2009ಕ್ಕೆ ಹಿಂದೆ ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿದ್ದು ಚುನಾವಣೆಯು ಮುಕ್ತಾಯವಾಗದಿದ್ದ ಸಂದರ್ಭಗಳಲ್ಲಿ ಮಾತ್ರ ದಿನಾಂಕ: 04–03–2009ರಲ್ಲಿದ್ದಂತೆ ಚುನಾವಣಾ ವೇಳಾ ಪಟ್ಟಿಯ ಯಾವ ಹಂತದಲ್ಲಿ ಚುನಾವಣಾ ಪ್ರಕ್ರಿಯೆಯನ್ನು ನಿಲ್ಲಿಸಲಾಗಿತ್ತೋ ಆ ಹಂತದಿಂದ ಚುನಾವಣಾ ಪ್ರಕ್ರಿಯೆಯನ್ನು ಮುಂದುವರಿಸಿ ದಿನಾಂಕ: 04–03–2009ರ ಆದೇಶದಲ್ಲಿ ನಿಗದಿಪಡಿಸಿದ ಕಾಲಮಿತಿಯೊಂದಿಗೆ ಮತ್ತು ಆ ಅನುಕ್ರಮದಲ್ಲಿ ಚುನಾವಣೆಯನ್ನು ಮುಕ್ತಾಯಗೊಳಿಸತಕ್ಕದ್ದೆಂದು ಆದೇಶಿಸಿರುತ್ತದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು, ದಿ ಬಿನ್ನಿಮಿಲ್ಸ್ ಲೇಬರ್ ಅಸೋಸಿಸೇಷನ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದರ 2009–2010ರಿಂದ 2013–2014ನೇ ಸಾಲುಗಳ ಅವಧಿಗೆ ಹೊಸ 'ಆಡಳಿತ ಸಮಿತಿ'ಯನ್ನು ಚುನಾಯಿಸಲು ಚುನಾವಣೆಯನ್ನು ನಡೆಸಿರುವುದಿಲ್ಲವೆಂದೂ, ಸಂಘದ ವ್ಯವಹಾರಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದ ಆಡಳಿತ ಮಂಡಳಿಯ ನಿರ್ದೇಶಕರಲೊಬ್ಬರಾದ ಶ್ರೀ ಆರ್. ಮನೋಜಿರಾವ್ ಇವರ ಅನಾರೋಗ್ಯಕ್ಕೆ ತುತ್ತಾಗಿ ಶಸ್ತ್ರ ಚಿಕಿತ್ಸೆಗೊಳಗಾಗಿದ್ದರಿಂದ ಸಂಘದ ಆಡಳಿತ ಮಂಡಳಿ ಚುನಾವಣೆಯನ್ನು ನಡೆಸುವ ಪ್ರಕ್ರಿಯೆ ಜರುಗಿರುವುದಿಲ್ಲವೆಂದೂ ಸದರಿ ಸಂಘಕ್ಕೆ ದಿನಾಂಕ: 31–10–2009ರವರೆವಿಗೆ ವಿನಾಯಿತಿಗೊಳಿಸಿ ಸಂಘದ ಆಡಳಿತ ಮಂಡಳಿಯ ಚುನಾವಣೆಯನ್ನು ಅಕ್ಟೋಬರ್ 2009ರಲ್ಲಿ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 212ರಡಿ ವಿಶೇಷ ಪ್ರಕರಣವೆಂದು ಪರಿಗಣಿಸಿ ಸಂಘದ ಆಡಳಿತ ಮಂಡಳಿಯ ಚುನಾವಣಾ ಕಾಲವನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಸದರಿ ಸಂಘಕ್ಕೆ ಚುನಾವಣೆಯನ್ನು ನಡೆಸಲು ದಿನಾಂಕ:30–11–2009ರವರೆಗೆ ಕಾಲಾವಕಾಶ ನೀಡಬಹುದೆಂದು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 177 ಸಿಎಲ್ಎಂ 2009, ಬೆಂಗಳೂರು, ದಿನಾಂಕ: 6ನೇ ನವೆಂಬರ್ 2009**

ಮೇಲಿನ ಪರಿಸ್ಥಿತಿಯಲ್ಲಿ ದಿ ಬಿನ್ನಿಮಿಲ್ಸ್ ಲೇಬರ್ ಅಸೋಸಿಸೇಷನ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5) 28ಬಿ(2), 29ಎಫ್ (4) ಮತ್ತು 39ಎ(2)ಅನ್ನು ಮಾರ್ಪಾಟು ಮಾಡಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ ಸಿಒ 47 ಸಿಎಲ್ಎಂ 2009, ದಿನಾಂಕ:04–03–2009 ಅನ್ನು ಭಾಗಶಃ ಮಾರ್ಪಡಿಸಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು 30–11–2009ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :** ಪ್ರಕರಣ 28ಎ(4), 28ಎ(5) 28ಬಿ(2), 29ಎಫ್ (4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ:30–11–2009ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 2644

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಶಿವರಾಮ, ಐ.ಎ.ಎಸ್. ಇಲಾಖಾ ವಿಚಾರಣೆ–ವಿಚಾರಣಾಧಿಕಾರಿಯವರ ಸಂಭಾವನೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 111 ಸೇಅಸೆ 2008, ದಿನಾಂಕ: 30–3–2009.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007, ದಿನಾಂಕ: 11–4–2009.

3) ಶ್ರೀ ಸಯ್ಯದ್ ನಿಸಾರ್ ಅಹಮದ್ ನಿವೃತ್ತ ಹಿರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ದಿನಾಂಕ:29–08–2009ರ ಪತ್ರ..

**ಪ್ರಸ್ತಾವನೆ :**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರದ ದಿನಾಂಕ:30–03–2009ರ ಆದೇಶದಲ್ಲಿ ಶ್ರೀ ಸಯ್ಯದ್ ನಿಸಾರ್ ಅಹಮದ್ ನಿವೃತ್ತ ಹಿರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ಶ್ರೀ ಶಿವರಾಮ ಐ.ಎ.ಎಸ್. ಇವರ ವಿರುದ್ಧದ ಆರೋಪಗಳನ್ನು ವಿಚಾರಣೆ ಮಾಡಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಶ್ರೀ ಸಯ್ಯದ್ ನಿಸಾರ್ ಅಹಮದ್ ಇವರು ತಮ್ಮ ದಿನಾಂಕ: 29–08–2009ರ ಪತ್ರದಲ್ಲಿ ವಿವರಿಸಲಾದ ಕಾರಣಗಳಿಗಾಗಿ, ವಿಚಾರಣಾಧಿಕಾರಿ ಸಂಭಾವನೆಯನ್ನು ರೂ. 25,000/– (ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ನಿಗಧಿಪಡಿಸಬೇಕೆಂದು ಕೋರಿರುತ್ತಾರೆ. ಸದರಿಯವ ಅರ್ಜಿಯನ್ನು ಸಿ.ಆ.ಸು.ಇ (ಸೇವಾ ನಿಯಮಗಳು) ಮತ್ತು ಆರ್ಥಿಕ ಇಲಾಖೆಯ ಸಮಲೋಚನೆಯೊಂದಿಗೆ ಪರಿಶೀಲಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿ.ಆ.ಸು.ಇ 111 ಎಸ್‌ಎಎಸ್ 2009, ಬೆಂಗಳೂರು, ದಿನಾಂಕ: 19ನೇ ನವಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ.ಶಿವರಾಮ ಐ.ಎ.ಎಸ್ ಇವರ ವಿರುದ್ಧದ ಆರೋಪಗಳ ವಿಚಾರಣೆ ಸಂಬಂಧದಲ್ಲಿ ವಿಚಾರಣಾಧಿಕಾರಿಯಾಗಿ ನೇಮಕವಾಗಿರುವ ಶ್ರೀ. ಸಯ್ಯದ್ ನಿಸಾರ್ ಅಹಮದ್ ನಿವೃತ್ತ ಹಿರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರಿಗೆ ರೂ. 15,000/– (ಹದಿನೈದು ಸಾವಿರ ರೂಪಾಯಿಗಳು ಮಾತ್ರ) ಸಂಭಾವನೆಯನ್ನು ನೀಡತಕ್ಕದೆಂದು ಆದೇಶಿಸಿದೆ.

ಈ ಆದೇಶವನ್ನು ಸಿಆಸುಇ (ಸೇವಾ ನಿಯಮ) ಮತ್ತು ಆರ್ಥಿಕ ಇಲಾಖೆಗಳು ಅನುಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿಗಳು ಸಂಖ್ಯೆ: ಸಿಆಸುಇ 260 ಸೇನಿಸಿ 2009, ದಿನಾಂಕ: 08–10–2009 ಮತ್ತು ಆಇ 1401 ಸೇ. 2009, ದಿನಾಂಕ: 14–11–2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಜಿ. ಅನಂತ**

ಪಿ.ಆರ್. 2646

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1).

## INFRASTRUCTURE DEVELOPMENT SECRETARIAT

**Sub:** Development of SH-132 on PPP mode (Saganakallu-Moka Road in Bellary)-preparation of Detailed project Report and Payment office – Reg.

**Read:** 1) G.O. No. ID 115 ITS 2008 dated 17-07-2009.

2) Letter No. PIU KSHIP: SH- 132: AE-6:2009-10/1378 dated 07-10-2009 of KSHIP, Bangalore.

**Preamble:**

In Government order No. IDD 115 ITS 2008 Dated 17-07-2009, in Principal approval of the Government for development of SH – 132 (Saganakallu-Moka Road in Bellary & to Join AP) and its implementation through private Sector participation (DBOT) was accorded. KSHIP was appointed as the Nodal Agency with a mandate to prepare Detailed project. Report amongst other things. The Project Director, Karnataka State Highway improvement Project (KSHIP) had sought services of M/s. Scott Wilson India Pvt. Ltd. Bangalore to prepare a Detailed project Report incorporating certain details. In response where of the Co, Scott Wilson India Pvt.Ltd., has made on offer and KSHIP has awarded the entrustment to the said company accepting the 4 lane option. The proposed Cost is Rs. 32,52,000.00 with the following payment schedule.

1) 40% of the Payment be released after completion of topographic surveys.
2) 40% of the Payment be released on submission of draft DPR and.
3) Balance 20% of payment be released on submission of final DPR along with EIA/EMP & Social impact assessment report.

In their letter No. PIU : KSHIP: SH-132 AE-6:2009-10/1378 dated 07-10-2009 of KSHIP, have reported that the Co. M/s. Scott Wilson India Pvt. Ltd. Bangalore have submitted the DPR on 07-10-2009 and enclosed 3 invoices of the Co. raised on KSHIP for a sum aggregating to Rs. 35,88,807.00 including service tax charged on the award amount of Rs. 32,52,000.00. The Project Director of KSHIP has certified that the consultants M/s. Scott Wilson India Pvt. Ltd., have carried out the job satisfactorily and recommended payment of all the 3 invoices. In the 37th meeting of the Steering Committee of KSHIP under the Chairmanship of Principal Secretary, PWD the expenditure of Rs. 32.52 lakhs for preparation of DPR has been ratified.

After examining all the aspects, Government has decided to pay Rs.32,52,000.00+ service tax of Rs. 3,36,907.00 aggregating to Rs. 35,88,907,00 to KSHIP as re-imbursement of expenditure incurred for preparation of detailed project Report in accordance with the award letter.

**Government Order No. IDD 115 ITS 2008, Bangalore, Dated: 16th November 2009**

Government is pleased to accord sanction for the release of Rs. 35,88,907.00 (including service tax element of Rs. 3,36,907.00 being the re-imbursement of cost of preparation of DPR for development of SH-132 (Saganakallu-Moka Road in Bellary & to join Ap).

2) This expenditure shall be met from the Head of Account "3451-00-090-1-06-059-infrastructure preliminary Studies Other Expenditure" out or the budget provision of Rs.881.00 lakhs in 2009-10

3) The Project Director, Karnataka State highways Improvement project (KSHIP) is authorized to draw the amount on a payees Receipt duly countersigned by the Under Secretary to Government, infrastructure Development Department.

4) This order is issued in accordance with the delegation of powers to the Principal Secretaries/ Secretaries to Govt. vide G.O. No FD1 TFP 2008 dated 16-05-2008..

By order and in Name of the Governor of Karnataka

**N.MANJULA GEETHA**

P.R. 2648

Under Secreatry to Government,

Infrastructure Development Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನ ಶ್ರೇಣಿ ರಹಿತ ವೈಜ್ಞಾನಾಧಿಕಾರಿ ಗ್ರೇಡ್–2 ಹುದ್ದೆಯ ಅವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 450 ಸೆಅಸೇ 2008, ದಿನಾಂಕ: 24–06–2008.
2) ಅನಧಿಕೃತ ಟಿಪ್ಪಣಿ ಸಂಖ್ಯೆ: ಅಪಜೀ 123 ಇಪಿಸಿ 2006, ದಿನಾಂಕ:21–10–2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನಶ್ರೇಣಿ ರಹಿತ ವೈಜ್ಞಾಧಿಕಾರಿ ಗ್ರೇಡ್–2 ಹುದ್ದೆಯನ್ನು ದಿನಾಂಕ:24–04–2008 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೈಜ್ಞಾಧಿಕಾರಿ ಗ್ರೇಡ್ –2 ಹುದ್ದೆಯ ಅವಧಿಯು ದಿನಾಂಕ: 23–04–2009ಕ್ಕೆ ಮುಕ್ತಾಯವಾಗಿರುವುದರಿಂದ, ಈ ಹುದ್ದೆಯನ್ನು ಮತ್ತೊಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 562 ಸಅಸೇ 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿರುವ ವೇತನಶ್ರೇಣಿ ರಹಿತ ವೈಜ್ಞಾನಿಕಾರಿ ಗ್ರೇಡ್–2 ಹುದ್ದೆಯನ್ನು ದಿನಾಂಕ:24–04–2009ರಿಂದ ಜಾರಿಗೆ ಬರುವಂತೆ ಪುನಃ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಪಿ.ಆರ್. 2649 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**ಸರ್ಕಾರಿ ಆದೇಶ ಸಂಖ್ಯೆ: ಸಿ.ಆ.ಸು.ಇ 48 ಸೇಸ್ಥಅ 2009, ಬೆಂಗಳೂರು, ದಿನಾಂಕ: 7ನೇ ನವೆಂಬರ್ 2009**

**ವಿಷಯ:** ದಿನಗೂಲಿ ನೌಕರರನ್ನು ಅವರಿಗೆ 60 ವರ್ಷ ವಯಸ್ಸಾಗುವವರೆಗೆ ದಿನಗೂಲಿ ಸೇವೆಯಲ್ಲಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಆದೇಶ ಸಂಖ್ಯೆ: ಸಿಆಸುಇ 44 ಸೇನಿಸಿ 2008, ದಿನಾಂಕ: 28–7–2008.

2) ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ದಿನಗೂಲಿ ನೌಕರರ ಮಹಾಮಂಡಲ, ಹುಬ್ಬಳ್ಳಿ ಇವರು ಮಾನ್ಯ ಮುಖ್ಯಮಂತ್ರಿಯವರಿಗೆ ಬರೆದಿರುವ ದಿನಾಂಕ: 10–7–2009ರ ಪತ್ರ ಸಂಖ್ಯೆ: ಕೆಎಸ್‌ಜಿಡಬ್ಲ್ಯೂಇಎಫ್–2009–10.

**ಪ್ರಸ್ತಾವನೆ:**

ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು ದಿನಾಂಕ: 18–7–2008ರಿಂದ ಜಾರಿಗೆ ಬರುವಂತೆ 58 ರಿಂದ 60 ವರ್ಷಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:28–7–2008ರ ಆದೇಶದಲ್ಲಿ ಹೆಚ್ಚಿಸಲಾಗಿದೆ. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರಕಾರಿ ದಿನಗೂಲಿ ನೌಕರರ ಮಹಾಮಂಡಲ, ಹುಬ್ಬಳ್ಳಿ ಇವರು ಈ ನಿವೃತ್ತಿ ವಯಸ್ಸಿನ ಹೆಚ್ಚಳವನ್ನು ದಿನಗೂಲಿ ನೌಕರರಿಗೂ ಅನ್ವಯಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿಯವರನ್ನು ಕೋರಿರುತ್ತಾರೆ.

ಸರ್ಕಾರಿ ನೌಕರರಿಗೆ ಅನ್ವಯವಾಗುವ ಸೇವಾ ನಿಯಮಗಳು ದಿನಗೂಲಿ ನೌಕರರಿಗೆ ಅನ್ವಯವಾಗುವುದಿಲ್ಲ. ಆದ್ದರಿಂದ ಮೇಲೆ ಓದಲಾದ ದಿನಾಂಕ:28–7–2008ರ ಆದೇಶವು ದಿನಗೂಲಿ ನೌಕರರಿಗೆ ಅನ್ವಯವಾಗುವುದಿಲ್ಲ. ದಿನಾಂಕ: 1–7–1984ರ ನಂತರ ದಿನಗೂಲಿ ನೌಕರರಾಗಿ ನೇಮಕಗೊಂಡು ಕಾರ್ಯನಿರ್ವಹಿಸುತ್ತಿರುವ ನೌಕರರನ್ನು ಮಾನವೀಯತೆಯ ಆಧಾರದ ಮೇಲೆ ಸೇವೆಯಲ್ಲಿ ಮುಂದುವರಿಸಲಾಗುತ್ತಿದೆ. ಈಗ ಅಂತಹ ನೌಕರರಿಗೆ 58 ವರ್ಷ ವಯಸ್ಸಾಗುವವರೆಗೆ ಅವರನ್ನು ದಿನಗೂಲಿ ಸೇವೆಯಲ್ಲಿ ಮುಂದುವರಿಸಲಾಗುತ್ತಿದೆ. ಮೇಲ್ಕಂಡ ಮಹಾಮಂಡಲದ ಕೋರಿಕೆಯ ಹಿನ್ನೆಲೆಯಲ್ಲಿ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ದಿನಗೂಲಿ ನೌಕರರನ್ನು ಅವರು 58 ವರ್ಷ ವಯಸ್ಸಾದ ನಂತರವೂ ಮುಂದುವರಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳಲ್ಲಿ ದಿನಗೂಲಿ ಸೇವೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರು ತಕ್ಷಣದಿಂದ ಜಾರಿಗೆ ಬರುವಂತೆ ಅವರಿಗೆ 60 ವರ್ಷ ವಯಸ್ಸಾಗುವವರೆಗೆ ಅಥವಾ ಈ ಕುರಿತು ಮುಂದಿನ ಆದೇಶ ಹೊರಡಿಸುವವರೆಗೆ, ಯಾವುದು ಮೊದಲೋ ಅಲ್ಲಿಯವರೆಗೆ ಇವರುಗಳು ದಿನಗೂಲಿ ಸೇವೆಯಲ್ಲಿ ಮುಂದುವರಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ949 ಸೇವೆಗಳು–1 09 ದಿನಾಂಕ: 31–8–2009ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಪಿ.ಆರ್. 2650 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು–2).

## EDUCATION SECRETARIAT

**Sub:** Framing of Model university Bill for University of Mysore and Karnataka University.

**Read:** 1) G.O. No. ID 115 ITS 2008 dated 17-07-2009.

2) Letter dt. 4-11-2009 from Sri M.K.Sridhar, Member Secretary Karnataka Knowledge Commission.

**Preamble:**

An expert committee was constituted by the Karnataka Knowledge commission to upgrade the universities of Karnataka in respect of improvement in their performance and leading to become cerntres of excellence. The expert committee has submitted its report for transforming the two universities in the State as centres of excellence. Accordingly Karnataka knowledge commission has sent report where in the expert committee has identified university of Mysore and Karnataka university for the said purpose.

In this regard, it has been decided to constitute a taskforce for framing a Seperate act. Hence this order.

**Govt. Order No.ED 220 URC 2009, Bangalore, Dated: 26th November 2009**

In the above circumstances, Government are pleased to constitute a Taskforce as follows for framing a separate Act for University of Mysore, Mysore and Karnataka University Dharwad enabling to Upgrade these universities as model universities.

| | | |
|---|---|---|
| 1. | Prof. B. Ramarao,<br>Chairman, Administrative Board,<br>A.R.C.A. Hyderabad. | Chairman |
| 2. | Prof. T.N. Sridhar,<br>Professor of Management,<br>Mangalore University, Mangalore. | Member |
| 3. | Sri. A.S. Srikanth IAS<br>Principal Secretary to government,<br>Education Department (Higher Education) | Member-Secretary |

The Taskforce shall submit its report to the Government within a month.

By order and in the Name of the Governor of Karnataka

**U.B. ULAVI**

P.R. 2651

Under Secreatry to Government,

Education Department (University)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** ರಾಜ್ಯದ ಅತ್ಯಂತ ಹಿಂದುಳಿದ 39 ತಾಲ್ಲೂಕುಗಳಲ್ಲಿ ಉನ್ನತ ಶಿಕ್ಷಣ ವ್ಯಾಸಂಗ ಮಾಡುವ ವಿದ್ಯಾರ್ಥಿಗಳ ದಾಖಲಾತಿ ಹೆಚ್ಚಳ ಮತ್ತು ವ್ಯಾಸಂಗದ ಗುಣಮಟ್ಟ ವೃದ್ಧಿಸಲು ವಿಶೇಷ ಪ್ಯಾಕೇಜ್ ಮತ್ತು ಬೀದರ್‌ನಲ್ಲಿ ಪಾಲಿಟೆಕ್ನಿಕ್ ಕಾಲೇಜಿನ ನೂತನ ಕಟ್ಟಡ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಸಿಇ/01/2009 ದಿನಾಂಕ:27–05–2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ, ಡಾ.ಡಿ.ಎಂ. ನಂಜುಂಡಪ್ಪ ಸಮಿತಿಯ ಸಲಹೆ ಮತ್ತು ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯದ 39 ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಒಟ್ಟು ದಾಖಲಾತಿ ಅನುಪಾತವು (GER) ಶೇ. 5.2ರಷ್ಟಿದ್ದು (ರಾಜ್ಯದಲ್ಲಿ ಒಟ್ಟು ದಾಖಲಾತಿ ಅನುಪಾತವು ಸುಮಾರು ಶೇ 12 ರಷ್ಟಿದೆ, ಶೇ 7.36 ರಷ್ಟು ಗ್ರಾಮೀಣ ಭಾಗದಲ್ಲಿ ಮತ್ತು ಶೇ. 21.20 ರಷ್ಟು ನಗರ ಭಾಗದಲ್ಲಿದೆ) ಈ ತಾಲ್ಲೂಕುಗಳನ್ನು ಅತ್ಯಂತ ಹಿಂದುಳಿದ ತಾಲ್ಲೂಕುಗಳೆಂದು ಗುರುತಿಸಲಾಗಿದೆ.

| ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು | ಕ್ರಮ ಸಂಖ್ಯೆ | ತಾಲ್ಲೂಕಿನ ಹೆಸರು |
|---|---|---|---|---|---|
| 01 | ಮಾಗಡಿ | 14 | ಹುಮ್ನಾಬಾದ್ | 27 | ಇಂಡಿ |
| 02 | ಕುಣಿಗಲ್ | 15 | ಗುಬ್ಬಿ | 28 | ಔರದ್ |
| 03 | ಚನ್ನಗಿರಿ | 16 | ಸಿರಾ | 29 | ಚಿತ್ತಾಪುರ |
| 04 | ಚಾಮರಾಜನಗರ | 17 | ಪಾವಗಡ | 30 | ಸಿಂಧಗಿ |
| 05 | ಸಿಂಧನೂರು | 18 | ಹರಪನಹಳ್ಳಿ | 31 | ಕುಷ್ಟಗಿ |
| 06 | ಹೊಸದುರ್ಗ | 19 | ಸೇಡಂ | 32 | ಯಲಬುರ್ಗಾ |
| 07 | ಬೀಳಗಿ | 20 | ಹೆಚ್.ಡಿ.ಕೋಟೆ | 33 | ಲಿಂಗಸಗೂರು |
| 08 | ಬಾಗೇಪಲ್ಲಿ | 21 | ಶೋರಾಪುರ | 34 | ಅಫ್ಜಲ್‌ಪುರ |
| 09 | ಸಂಡೂರು | 22 | ಬಸವಕಲ್ಯಾಣ | 35 | ಅಳಂದ |
| 10 | ಭಾಲ್ಕಿ | 23 | ಮುದ್ದೇಬಿಹಾಳ | 36 | ಶಹಪುರ |
| 11 | ಕನಕಪುರ | 24 | ಮಾನ್ವಿ | 37 | ಚಿಂಚೋಳಿ |
| 12 | ಕೂಡ್ಲಿಗಿ | 25 | ಬಸವನಬಾಗೇವಾಡಿ | 38 | ಜೇವರ್ಗಿ |
| 13 | ಮಧುಗಿರಿ | 26 | ಯಾದಗೀರ್ | 39 | ದೇವದುರ್ಗ |

ರಾಜ್ಯದ ಅತ್ಯಂತ ಹಿಂದುಳಿದ 39 ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಒಟ್ಟು 60 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ 18,000 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಅದರಲ್ಲಿ 750 ವಿದ್ಯಾರ್ಥಿಗಳು ವಿಜ್ಞಾನ ವಿಷಯವನ್ನು ಅಭ್ಯಾಸ ಮಾಡುತ್ತಿದ್ದಾರೆ. ಈ ಪೈಕಿ 45 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ವಿಜ್ಞಾನ ವಿಭಾಗಗಳನ್ನು ತೆರೆಯಲು ಒಟ್ಟು ರೂ. 300.00 ಲಕ್ಷಗಳನ್ನು ಒದಗಿಸುವಂತೆ ಹಾಗೂ 60 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಮೂಲ ಸೌಕರ್ಯಗಳನ್ನು ಉನ್ನತೀಕರಿಸಲು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಜಮೀನು ಮತ್ತು ಪ್ರಯೋಗಾಲಯ ಸೌಲಭ್ಯ ಒದಗಿಸುವುದಕ್ಕಾಗಿ ಒಟ್ಟು ರೂ.300.00 ಲಕ್ಷಗಳನ್ನು ವೆಚ್ಚದ ವಿಶೇಷ ಪ್ಯಾಕೇಜಿನ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಸಚಿವ ಸಂಪುಟವು ದಿನಾಂಕ: 27-08-2009ರಲ್ಲಿ ಬೀದರ್ ಪಟ್ಟಣದಲ್ಲಿನ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ಪೂರ್ಣ ಪ್ರಮಾಣದ ನೂತನ ಕಟ್ಟಡವನ್ನು ನಿರ್ಮಿಸಲು ಸುಮಾರು ರೂ. 10.00 ಕೋಟಿ ಅಂದಾಜುವೆಚ್ಚದ ಕಾಮಗಾರಿಗೆ ಅನುಮೋದನೆ ನೀಡಿದೆ. ಸದರಿ ಕಟ್ಟಡ ಕಾಮಗಾರಿಗಾಗಿ ಮೊದಲನೇ ಕಂತಾಗಿ ಪ್ರಸಕ್ತ ಸಾಲಿಗೆ ರೂ. 3.50 ಕೋಟಿ ಅನುದಾನ ಬಿಡುಗಡೆ ಮಾಡುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಬೆಂಗಳೂರು ರವರು ಕೋರಿರುತ್ತಾರೆ.

ಈ ಎರಡೂ ಪ್ರಸ್ತಾವನೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 126 ಯೋಯೋಕ 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ರಾಜ್ಯದ ಅತ್ಯಂತ ಹಿಂದುಳಿದ 39 ತಾಲ್ಲೂಕುಗಳಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಅವುಗಳ ಮುಂದೆ ತೋರಿಸಿರುವ ಅನುದಾನದ ಮಿತಿಯೊಳಗೆ ಅನುಷ್ಠಾನಗೊಳಿಸಲು ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ. ಖರೀದಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಖರೀದಿ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸಲು ಸೂಚಿಸಿದೆ.

| ಕ್ರಮ ಸಂಖ್ಯೆ | ವಿಷಯ | 2009-10ನೇ ಸಾಲಿನಲ್ಲಿ ಒದಗಿಸಬೇಕಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 01 | 60 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಮೂಲಭೂತ ಸೌಲಭ್ಯ ಒದಗಿಸುವುದು (ಪ್ರತಿ ಕಾಲೇಜಿಗೆ ರೂ. 5.00 ಲಕ್ಷಗಳಂತೆ ಒಂದು ಬಾರಿಗೆ ಮಾತ್ರ)<br>ಲೆಕ್ಕ ಶೀರ್ಷಿಕೆ "2202-03-103-2-01-059" | 300.00 |
| 02 | 45 ವಿಜ್ಞಾನ ವಿಭಾಗಗಳು ಇಲ್ಲದಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ವಿಜ್ಞಾನ ವಿಭಾಗಗಳನ್ನು ತೆರೆಯಲು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಜಮೀನು ಹಾಗೂ ಪ್ರಯೋಗಾಲಯ ಸೌಲಭ್ಯ ಒದಗಿಸುವುದು.<br>ಲೆಕ್ಕಶೀರ್ಷಿಕೆ "2202-03-103-2-04-059" | 300.00 |

ತಾಂತ್ರಿಕ ಶಿಕ್ಷಣ ಇಲಾಖೆಗೆ ಸಂಬಧಿಸಿದಂತೆ ಬೀದರ್ ಪಟ್ಟಣದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ನೂತನ ಕಟ್ಟಡವನ್ನು ರೂ. 10.00ಕೋಟಿ (ಹತ್ತು ಕೋಟಿ ರೂಪಾಯಿಗಳು ಮಾತ್ರ) ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಅನುಮೋದನೆ ನೀಡಿ, ಸದರಿ ಕಾಮಗಾರಿಗೆ ಮೊದಲನೇ ಕಂತಾಗಿ ರೂ. 350.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 4202–02–104–1–01 ಅಡಿಯಲ್ಲಿ ಭರಿಸಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ. ಈ ಕಾಮಗಾರಿಯನ್ನು ಕೈಗೊಳ್ಳಲು ನಕ್ಷೆ ಹಾಗೂ ಅಂದಾಜು ಪಟ್ಟಿಯನ್ನು ತಯಾರಿಸಿ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲು ಸೂಚಿಸಿದೆ. ಕಟ್ಟಡ ಕಾಮಗಾರಿಯಲ್ಲಿ ಖರೀದಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಎಲ್ಲಾ ಖರೀದಿ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸಲು ಸೂಚಿಸಿದೆ. ಇಲಾಖೆಯ ಅಧಿಕಾರಿಗಳು ಹಾಗೂ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನ ಪ್ರಾಂಶುಪಾಲರು ಕಾಮಗಾರಿಯ ಪ್ರಗತಿಯ ಬಗ್ಗೆ ಆಗಿಂದಾಗ್ಗೆ ಪರಿಶೀಲಿಸಿ ವರದಿ ಸಲ್ಲಿಸತಕ್ಕದ್ದು.

ಮೇಲ್ಕಾಣಿಸಿದ ಎಲ್ಲಾ ಬಾಬ್ತುಗಳಿಗೆ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿದ ಅನುದಾನವನ್ನು ಪೂರ್ಣ ಉಪಯೋಗಿಸಿಕೊಂಡು ಭರಿಸಲು ಮತ್ತು ಆರ್ಥಿಕ ವರ್ಷದ ಅಂತ್ಯಕ್ಕೆ ಕೊರತೆಯಾದಲ್ಲಿ ಪೂರ್ಣ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ:ಆಇ 1319 ವೆಚ್ಚ–8/09 ದಿನಾಂಕ:20–10–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2652

ವಿಶೇಷಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ).

**ವಿಷಯ:** ಹಾಸನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯ ಕಟ್ಟಡದ ಬಾಡಿಗೆಗೆ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 60 ಟಿಇಸಿ 2000(2), ದಿನಾಂಕ: 12–7–2007.

2) ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಡಿಟಿಇ 29 ಬಿಎಲ್‌ಡಿ 2008. ದಿನಾಂಕ 22–12–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಾಸನ ನಗರದಲ್ಲಿ ಹೊಸ ಇಂಜಿನಿಯರಿಂಗ್ ಕಾಲೇಜನ್ನು 2007–08ನೇ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಹಾಸನದ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದು, ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಹಾಸ್ಟೆಲ್ ಕಟ್ಟಡ ನಿರ್ಮಾಣ ಆಗುವವರೆಗೆ ವಿದ್ಯಾರ್ಥಿನಿಯರ ತಂಗುವಿಕೆಗಾಗಿ ಶ್ರೀ ಹೆಚ್.ಎಸ್.ಜಯರಾಂ ಬಿನ್ ಹೆಚ್.ಎಸ್. ಶ್ರೀನಿವಾಸ ರಾಘವಚಾರ್, ಕೆ.ಆರ್.ಪುರಂ, ಹಾಸನ ಇವರ ಖಾಸಗಿ ಕಟ್ಟಡವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಹಾಸನ ಇವರು ನಿಗದಿಪಡಿಸಿರುವ ಮಾಸಿಕ ಬಾಡಿಗೆ ರೂ. 30,000 ರಂತೆ ದಿನಾಂಕ 02–03–2009 ರಿಂದ ಬಾಡಿಗೆಗೆ ಪಡೆಯಲಾಗಿದ್ದು, ಪ್ರತಿ ತಿಂಗಳು ಮಾಸಿಕ ಬಾಡಿಗೆಯನ್ನು ಪಾವತಿಸಲು ಸಕಾರದ ಅನುಮತಿಯನ್ನು ಕೋರಿರುತ್ತಾರೆ. ಸದರಿ ಬಾಡಿಗೆಯನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ "2203–00–112–0–02–059" ಯೋಜನೆ ಅಡಿಯಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 194 ಯೋಸಕ 2009, ಬೆಂಗಳೂರು, ದಿನಾಂಕ: 19ನೇ ನವೆಂಬರ್ 2009**

ಹಾಸನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯವನ್ನು ಶ್ರೀ ಹೆಚ್.ಎಸ್. ಜಯರಾಂ ಬಿನ್ ಹೆಚ್.ಎಸ್. ಶ್ರೀನಿವಾಸ ರಾಘವಚಾರ್, ಕೆ.ಆರ್.ಪುರಂ, ಹಾಸನ ಇವರ ಖಾಸಗಿ ಕಟ್ಟಡವನ್ನು ದಿನಾಂಕ: 02–03–2009 ರಿಂದ ಮಾಸಿಕ ರೂ 30,000 ರ ಬಾಡಿಗೆ ಆಧಾರದ ಮೇಲೆ ಪಡೆಯಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಅನುಮತಿ ನೀಡಿದೆ.

ಸದರಿ ಮೊತ್ತವನ್ನು 2009–10ನೇ ಸಾಲಿಗೆ ಲೆಕ್ಕಶೀರ್ಷಿಕೆ "2203–00–112–0–02–059 ಯೋಜನೆ" ಅಡಿ ಒದಗಿಸಿರುವ ಅನುದಾನದ ಮಿತಿಯೊಳಗೆ ಭರಿಸತಕ್ಕದ್ದು.

**ಷರತ್ತುಗಳು :**

* ದಿನಾಂಕ 02–03–2009 ರಿಂದ ಅನ್ವಯವಾಗುವಂತೆ ಲೋಕೋಪಯೋಗಿ ಇಲಾಖೆ ನಿಗದಿಪಡಿಸಿರುವ ದರಗಳಲ್ಲಿ ಬಾಡಿಗೆ ನಿಗದಿಪಡಿಸತಕ್ಕದ್ದು.

* ಸದರಿ ಬಾಡಿಗೆಯನ್ನು ಡಿ.ಸಿ.ಬಿಲ್ಲಿನ ಮೂಲಕ ಡ್ರಾ ಮಾಡಿ ಕಟ್ಟಡದ ಬಾಡಿಗೆ ಪಾವತಿಸತಕ್ಕದ್ದು.
* ಆದೇಶ ನೀಡಿದ ನಂತರ ಆಯಾ ತಿಂಗಳ ಬಾಡಿಗೆಯನ್ನು ಡಿ.ಸಿ.ಬಿಲ್ಲಿನ ಮುಖಾಂತರ ಡ್ರಾ ಮಾಡಿ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿನಿಲಯಕ್ಕಾಗಿ ಸ್ವಂತ ಕಟ್ಟಡ ನಿರ್ಮಾಣ ಮಾಡುವವರೆಗೆ ಅಥವಾ ಸದರಿ ಕಟ್ಟಡಕ್ಕಿಂತ ಕಡಿಮೆ ಬಾಡಿಗೆಯಲ್ಲಿ ಬೇರೆ ಸೂಕ್ತವಾದ ಕಟ್ಟಡ ದೊರೆತು ಸದರಿ ಕಟ್ಟಡವನ್ನು ತೆರವು ಮಾಡಿದ ದಿನದವರೆಗೆ ಮಾಲೀಕರಿಗೆ ಬಾಡಿಗೆ ಪಾವತಿಸತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2834 ಐಎಫ್ (ಬಿ & ಎ) 2009 ದಿನಾಂಕ: 13–11–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 2653

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ (ಯೋಜನೆ).

## INFRASTRUCTURE DEVELOPMENT SECRETARIAT

**Sub:** Nominating KSIIDC as the nodel agency to coordinate in the matters relating to the implementation of Dhabol-Bangalore (Bidadi) gas pipeline and creation of a cell in KSIIDC – release of funds.

**Read:** 1) G.O. No. IDD. 14 UIP 08 dated 10-07-2008.
2) proceedings of Apex Level Co-ordination Committee meeting held on 10-8-2009.
3) Letter No. KSIIDC/PID/1663/2009-10 dated 29-9-2009 of MD, KSIIDC.

**Preamble:**

In G.O read at SL.No (1) above, Government of Karnataka has constituted an Apex level Co-ordination Group (CoG) under the Chairmanship of Principal Secretary to Govt. IDD, for overseeing the implementation of Dabol-Bangalore (Bidadi) Gas pipeline project.

2. In the Apex Level Co-ordinaiton Committee meeting held on 10-8-09 read at Sl.No (2) above it was decided to designate KSIIDC as a Nodal Agency to Co-ordinate in all matters on behalf of IDD.

3. Managing Director, KSIIDC in his letter read at Sl.No. (3) above has given the estimated cost of creation of a cell in KSIIDC consequent to its appointment as nodal agency to the above said project. The estimated cost for creation of a cell in KSIIDC for a period from 20-09-2010 to 2011-12 is as under.

| Period | Requirement of Budgetary grants (Rs. In lakhs) |
|---|---|
| 2009-10 | 19.50 |
| 2010-11 | 55.00 |
| 2011-12 | 60.00 |
| **Total** | **134.50** |
| **Say** | **135.00** |

4. The Proposal of SKIIDC has been examined and it is decided in principal to appoint KSIIDC as a nodal agency to co-ordinate in all the matters on behalf of IDD/GoK and also to enter into on agreement / MoU with KSIIDC. KSIIDC is also allowed to spend an estimated expenditure of Rs. 135.00 lakhs over the project implementation period of 3 years for the service under the Head of Account "3451-00-090-1-06-059-Infrastructure preliminary Studies".

5. Hence this order

**Government. Order No.IDD 14 UIP 2008, Bangalore dated: 25th November 2009**

Government of Karnataka is pleased to designate KSIIDC as the nodal agency to the activities relating to the implementation of Dabhol Bangalore- Gas pipeline on behalf of Infrastructure Dev Dept. Gok as under.

I. Government of Karnataka to provide support for land acquisition.

a. In view of the provisions of Petroleum and Minerals pipeline Act, 1962 for acquiring land for the gas pipeline corridor.
b. Acquisition of land for terminals, pumping stations, etc under other Acts in force.
c. Coordination in the above matters of land acquisition and getting the land for corridor and other related facilities free from all encumbrances including utility shifting ect.

i. Deputy Commissioner of the Concerned Districts
ii. Concerned Municipalities / Urdan Development Authorities
iii. KPWD,KRDCL, KSHIP Authorities
iv. KSRTC, NWKRTC, NEKRTC etc.
v. BBMP, BMTC, BDA, BMRDA, BESCOM
vi. Energy Department
vii Railway
viii. KIADB
ix. Forest Department.
x. Other Agencies, if any within administrative control Gok

II Co-ordination for obtaining necessary approvals from various agencies/authorities in Karnataka.

III. Servicing the Secreatriat for the Apex Level Co-ordination Group (CoG) with respect to above mentioned issues.

- KSIIDC to assist IDD in review/examine the proposals/requests of GAIL.
- In fixing detailed schedule of activities indicating the milestones for the project to be provided by GAIL. KSIIDC to assist IDD to monitor the progress of implementation of the project.

IV. KSIIDC to co-ordinate in obtaining maps, reports documents from various agencies in Gok.

V. Any other issue for co-ordination within the state.

2. Government is pleased to release on amount of Rs. 19.50 lakhs for the period 2009-10 towards the estimated cost for creation of a cell subject to having a formal agreement / MoU with KSIIDC.

3. This expenditure shall be met from the Head of Account “3451-00-090-1-06-059-infrastructure preliminary Studies-other Expenditure” out of the Budget provision of Rs. 881.00 lakhs in 2009-10.

4. The Managing Director KSIIDC is authorized to draw the amount on a payees Receipt duly countersigned by the under Secretary to Government. Infrastructure Development Department.

5. Sanction is also accorded to create a “GALL Project Cell” in KSIIDC.

6. This order is issued in accordance with concurrence of Finance Department given vide, U.O. Note No. FD 774 Exp.1/2009 dated 20-11-2009.

By order and in Name of the Governor of Karnataka

**N. MANJUAL GEETHA**

P.R. 2657

Under Secreatry to Government,
Infrastructure Development Department.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿವಿಧ ವೃಂದದ 137 ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕರ ಸದಸ್ಯರು ಇವರ ಪತ್ರ ಸಂಖ್ಯೆ: ಕೆಐಎಡಿಬಿ/ ವಿಜಿ/ ಕೇಂಕ/ 4863/ 08–09, ದಿನಾಂಕ: 01–08–2008, 22–09–2008, 24–10–2008, 11–12–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ದಿನಾಂಕ: 01–08–2008, 22–09–2008, 24–10–2008, 11–12–2008ರ ಪತ್ರಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಪ್ರಸ್ತುತ 4 ವಲಯಗಳಿದ್ದು, ಈ ವಲಯ ಕಛೇರಿಗಳಲ್ಲಿ 4 ವಿಶೇಷ ಭೂಸ್ವಾಧೀನಾಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಬೆಂಗಳೂರು ಮತ್ತು ಧಾರವಾಡ ವಲಯ ಕಛೇರಿಗಳಿಗೆ ಹೆಚ್ಚಿನ

ಕಾರ್ಯವ್ಯಾಪ್ತಿ ಇದ್ದು, ಪ್ರಸ್ತುತ ಜಾರಿಯಲ್ಲಿರುವ ಭೂಸ್ವಾಧೀನ ಪ್ರಕರಣಗಳು/ ಸರ್ಕಾರದ ಆಯವ್ಯಯದಲ್ಲಿ ಪ್ರಸ್ತಾಪಿಸಿದ ಸುವರ್ಣ ಕರ್ನಾಟಕ ಕಾರಿಡಾರ್ ಯೋಜನೆಗಳು / ಚೆನ್ನೈ–ಬೆಂಗಳೂರು–ಮುಂಬೈ ಇಂಡಸ್ಟ್ರಿಯಲ್ ಕಾರಿಡಾರ್ ಯೋಜನೆ/ ಎಸ್.ಇ.ಜೆಡ್ / ಏಕಘಟಕ ಸಂಕೀರ್ಣಗಳಿಗಾಗಿ ಭೂಸ್ವಾಧೀನ ಪ್ರಕ್ರಿಯೆಗೆ ನಿಗದಿತ ಕಾಲಾವಧಿಯಲ್ಲಿ ಪ್ರಾಥಮಿಕ ಅಧಿಸೂಚನೆ ಪ್ರಸ್ತಾವನೆ ತಯಾರಿಸುವಲ್ಲಿ ಮತ್ತು ಅಂತಿಮ ಅಧಿಸೂಚನೆ ಪ್ರಸ್ತಾವನೆಯನ್ನು ತಯಾರಿಸುವಲ್ಲಿ ವಿಳಂಬವಾಗುತ್ತಿದೆ. ಇದನ್ನು ಮನಗಂಡು, ನಿಯೋಜಿತ ಹಾಗೂ ಹೊಸದಾಗಿ ಅನುಮೋದಿಸುವ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಭೂಸ್ವಾಧೀನ ಪ್ರಕ್ರಿಯೆಗೆ ಮೂಲಭೂತ ಸೌಕರ್ಯವನ್ನು ಹೆಚ್ಚಿಸಲು ನಿರ್ಣಯಿಸಲಾಗಿದೆ.

ಭೂಸ್ವಾಧೀನ ಪ್ರಕರಣವು ಹೆಚ್ಚಾಗಿರುವುದರಿಂದ ವಿಶೇಷ ಭೂಸ್ವಾಧೀನಾಧಿಕಾರಿಯವರ ಒತ್ತಡವನ್ನು ಕಡಿಮೆ ಮಾಡಿ ಕಂದಾಯ ವಿಭಾಗಗಳ ಆಧಾರ ಹಾಗೂ ಭೂಸ್ವಾಧೀನ ಪ್ರಕರಣಗಳು ಹೆಚ್ಚಾಗಿರುವ ಜಿಲ್ಲೆಗಳನ್ನು ಗುರುತಿಸಿ 6 ವಲಯ ಕಛೇರಿಗಳನ್ನು ಸ್ಥಾಪಿಸುವುದು ಸಮಂಜಸ ಹಾಗೂ ಆಡಳಿತಾತ್ಮಕ ದೃಷ್ಟಿಯಿಂದ ಸೂಕ್ತವೆಂದು ಮನಗಂಡು, ಇದಕ್ಕೆ ಬೇಕಾಗುವ ಸಿಬ್ಬಂದಿಯನ್ನು ನಿಯೋಜಿಸಬೇಕಾಗಿರುತ್ತದೆ. ನಿಯೋಜನೆ ಮೇರೆಗೆ ಸಿಬ್ಬಂದಿ ಲಭ್ಯವಾಗದೇ ಇದ್ದಲ್ಲಿ, ಪ್ರಥಮ ದರ್ಜೆ ಸಹಾಯಕರು / ರಾಜಸ್ವ ನಿರೀಕ್ಷಕರು / ಬೆರಳಚ್ಚುಗಾರರು / ವಾಹನ ಚಾಲಕರು / ಪ್ರೋಸಸ್ ಸರ್ವರ್ ಉದ್ಯೋಗಗಳಿಗೆ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಸೃಜಿಸಿ ನೇಮಕ ಮಾಡಿಕೊಳ್ಳಲು ಅನುಮತಿ ನೀಡಲು ಹಾಗೂ ಈ ಹುದ್ದೆಗಳ ಸೃಜನೆಯಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಮಂಡಳಿಯ ಆರ್ಥಿಕ ಸಂಪನ್ಮೂಲದಿಂದ ಭರಿಸಲಾಗವುದೆಂದು ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕೆ.ಐ.ಎ.ಡಿ.ಬಿ. ಇವರು ತಿಳಿಸಿರುತ್ತಾರೆ.

ದಿನಾಂಕ: 19–8–2008ರಂದು ನಡೆದ ಮಂಡಳಿಯ 289ನೇ ಸಭೆಯ ಹೆಚ್ಚುವರಿ ವಿಷಯ:2ರಲ್ಲಿ ಮಂಡಳಿಯಲ್ಲಿನ ಮಾನವ ಶಕ್ತಿಯನ್ನು ಬಲಿಷ್ಟಗೊಳಿಸಲು (Strengthening Man Power in KIADB) ಚರ್ಚಿಸಲಾಗಿದೆ. ಸದರಿ ಸಭೆಯಲ್ಲಿ ಮಂಡಳಿಯ ಅಧ್ಯಕ್ಷರಿಗೆ ಹೆಚ್ಚುವರಿ ಹಣಕಾಸಿನ ಹೊರೆ ಇಲ್ಲದೇ ವಿವಿಧ ವೃಂದದ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸುವ, ನೇರವಾಗಿ ನೇಮಕ ಮಾಡುವ ಬಗ್ಗೆ ಹಾಗೂ ಪದೋನ್ನತಿ ಮೂಲಕ ಭರ್ತಿ ಮಾಡುವ ಬಗ್ಗೆ ನಿರ್ಧರಿಸಲು ಅಧಿಕಾರ ನೀಡಲಾಗಿತ್ತು. ಅದರಂತೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಅಧ್ಯಕ್ಷರು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರಿಗೆ ದಿನಾಂಕ:05–09–2008ರಲ್ಲಿ ಟಿಪ್ಪಣಿ ಸಲ್ಲಿಸುತ್ತಾರೆ. ಸದರಿ ಟಿಪ್ಪಣಿಯನ್ವಯ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಅಭಿವೃದ್ಧಿ ಇಲಾಖೆಗೆ ಸಂಬಂಧಿಸಿದಂತೆ 20 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ 75 ಹುದ್ದೆಗಳನ್ನು ಪದೋನ್ನತಿ ಮೂಲಕ 4 ಹುದ್ದೆಗಳನ್ನು ನಿಯೋಜನೆ ಮೇರೆಗೆ ಹಾಗೂ 38 ಹುದ್ದೆಗಳನ್ನು ಹೊರ ಗುತ್ತಿಗೆ ಮೂಲಕ ಭರ್ತಿ ಮಾಡಲು ಪ್ರಸ್ತಾಪಿಸಿದೆ. ಈ 137 ಹುದ್ದೆಗಳಿಗೆ ತಗಲುವ ಆರ್ಥಿಕ ವೆಚ್ಚ ವಾರ್ಷಿಕ ರೂ. 63.13 ಲಕ್ಷ ಎಂದು ಅಂದಾಜಿಸಲಾಗಿದೆ. ಅದರಂತೆ ಈ ಕೆಳಕಂಡ 137 ಹುದ್ದೆಗಳನ್ನು ಸೃಜಿಸುವ ಸರ್ಕಾರದ ಅನುಮೋದನೆ ಕೋರಲಾಗಿತ್ತು.

| Sl. No. | Name of the Post | Number of Posts to be created | Suggested Mode of Filling Up | | | |
|---|---|---|---|---|---|---|
| | | | Direct Recruitment | Promotion | Deputation | Outsourcing |
| 1. | Additional Chief Development Officer | 02 | -- | 02 | -- | -- |
| 2. | Development Officer | 04 | -- | 03 | 01 | -- |
| 3. | Deputy Development Officer | 11 | 02 | 06 | 03 | -- |
| 4. | Assistant Executive Engineer (Electrical) | 01 | -- | 01 | -- | -- |
| 5. | Assistant Engineers/ Junior Engineers | 23 | 18 | 05 | -- | -- |
| 6. | Assistant Secretary | 07 | -- | 07 | -- | -- |
| 7. | Superintendent | 15 | -- | 15 | -- | -- |
| 8. | Senior Assistant | 28 | -- | 28 | -- | -- |
| 9. | Assistant | 08 | -- | 08 | -- | -- |
| 10. | Stenographer | 10 | -- | -- | -- | 10 |

| Sl. No. | Name of the Post | Number of Posts to be created | Suggested Mode of Filling Up | | | |
|---|---|---|---|---|---|---|
| | | | Direct Recruitment | Promotion | Deputation | Outsourcing |
| 11. | Junior Assistant | 06 | -- | -- | -- | 06 |
| 12. | Typist/Data Entry Operator | 12 | -- | -- | -- | 12 |
| 13. | Driver | 02 | -- | -- | -- | 02 |
| 14. | Attenders | 04 | -- | -- | -- | 04 |
| 15. | Peons | 04 | -- | -- | -- | 04 |
| | **Total** | **137** | **20** | **75** | **04** | **38** |

ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕರ್ನಟಕ ಪ್ರದೇಶಾಭಿವೃದ್ಧಿ ಮಂಡಳಿಯ ಕಾರ್ಯ ಒತ್ತಡ ನಿರ್ವಹಿಸಲು ಮಂಡಳಿ ಕೋರಿರುವಂತೆ ಹುದ್ದೆಗಳನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡು ಮಂಡಳಿಯ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಹಾಗೂ ನೇರ ನೇಮಕಾತಿಗೆ ಸಂಬಂಧಿಸಿದಂತೆ ನೇರ ನೇಮಕಾತಿ ವಿಧಾನದ ಬಗ್ಗೆ ಪ್ರಸ್ತಾವನೆ ಸಲ್ಲಿಸಲು ಸೂಚಿಸುತ್ತಾ, ಪ್ರಸ್ತಾವನೆಯಲ್ಲಿರುವ ಹುದ್ದೆಗಳನ್ನು ಭರ್ತಿ ಮಾಡಲು, ಸೃಜಿಸಲು ತೀರ್ಮಾನಿಸಿದೆ. ಅದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 286 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ: 16ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿನ ಹೆಚ್ಚಿನ ಕಾರ್ಯ ಒತ್ತಡವನ್ನು ನಿಭಾಯಿಸಲು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ, ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| Sl. No. | Name of the Post | Number of Posts to be created | Mode of Filling Up of Posts | | | |
|---|---|---|---|---|---|---|
| | | | Direct Recruitment | Promotion | Deputation | Outsourcing |
| 1. | Additional Chief Development Officer | 02 | -- | 02 | -- | -- |
| 2. | Development Officer | 04 | -- | 03 | 01 | -- |
| 3. | Deputy Development Officer | 11 | 02 | 06 | 03 | -- |
| 4. | Assistant Executive Engineer (Electrical) | 01 | -- | 01 | -- | -- |
| 5. | Assistant Engineers/ Junior Engineer | 23 | 18 | 05 | -- | -- |
| 6. | Assistant Secretary | 07 | -- | 07 | -- | -- |
| 7. | Superintendent | 15 | -- | 15 | -- | -- |
| 8. | Senior Assistant | 28 | -- | 28 | -- | -- |
| 9. | Assistant | 08 | -- | 08 | -- | -- |
| 10. | Stenographer | 10 | -- | -- | -- | 10 |
| 11. | Junior Assistant | 06 | -- | -- | -- | 06 |

| Sl. No. | Name of the Post | Number of Posts to be created | Suggested Mode of Filling Up | | | |
|---|---|---|---|---|---|---|
| | | | Direct Recruitment | Promotion | Deputation | Outsourcing |
| 12. | Typist/Data Entry Operator | 12 | -- | -- | -- | 12 |
| 13. | Driver | 02 | -- | -- | -- | 02 |
| 14. | Attenders | 04 | -- | -- | -- | 04 |
| 15. | Peons | 04 | -- | -- | -- | 04 |
| | **Total** | **137** | **20** | **75** | **04** | **38** |

ಅ) ಶೀಘ್ರಲಿಪಿಗಾರ, ಬೆರಳಚ್ಚುಗಾರ / ಡಾಟಾ ಎಂಟ್ರಿ ಆಪರೇಟರ್ಸ್, ವಾಹನ ಚಾಲಕರು, ಕಿರಿಯ ಸಹಾಯಕರು, ದಲಾಯತ್ ಮತ್ತು ಜವಾನರ ಒಟ್ಟು 38 ಹುದ್ದೆಗಳನ್ನು ಹೊರಗುತ್ತಿಗೆ (Outsourcing) ಆಧಾರದ ಮೇಲೆ ಮಾತ್ರ ಭರ್ತಿ ಮಾಡತಕ್ಕದ್ದು.

ಆ) ಮೇಲ್ಕಾಣಿಸಿದ ಎಲ್ಲಾ 137 ಹುದ್ದೆಗಳ ವೆಚ್ಚಗಳನ್ನು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದಲೇ ಭರಿಸತಕ್ಕದ್ದು.

ಇ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ರಾಜ್ಯದ ಹೆಚ್ಚಿನ ಅಭಿವೃದ್ಧಿಗೆ ಅನುಕೂಲಕರ ಮಾಡಿಕೊಡುವುದರಿಂದ ಉದ್ಭವಿಸಬಹುದಾದ ಅಗತ್ಯತೆಯ ಅನುಸಾರ ಹೆಚ್ಚಿನ ಸಂಪನ್ಮೂಲಗಳತ್ತ ಗಮನವನ್ನು ಕೇಂದ್ರೀಕರಿಸಿ, ಭವಿಷ್ಯದಲ್ಲಿ ಈ ಹುದ್ದೆಗಳನ್ನು ಹೇಗೆ ಪುನರ್ ವಿನ್ಯಾಸಗೊಳಿಸಬಹುದಾದ ಎಂಬ ಬಗ್ಗೆ ಮುಂದಾಲೋಚನೆಯನ್ನು (Vision) ಹೊಂದಿರುವುದು.

ಈ) ಸಾಧ್ಯವಾದಷ್ಟು ಮಟ್ಟಿಗೆ ವೆಚ್ಚದ ಉಳಿತಾಯದ ಉಪಾಯಗಳನ್ನು ಹಾಗೂ ವಿವಿಧ ಅಭಿವೃದ್ಧಿ ಕಾಮಗಾರಿಗಳಿಗೆ ತಾಂತ್ರಿಕ (Technology) ಅಂಶಗಳ ಉಪಯುಕ್ತತೆಯನ್ನು ಬಳಸುವುದು.

ಉ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಭವಿಷ್ಯದಲ್ಲಿ ತನ್ನ ಕಾರ್ಯವನ್ನು ಹುದ್ದೆಗಳನ್ನು ಹೆಚ್ಚಿಸಲು ಅಥವಾ ಅವುಗಳ ಸಂಖ್ಯೆಗಳನ್ನು retionalize ಮಾಡಲು ಇಚ್ಛಿಸಿದಲ್ಲಿ ಸವಿವರವಾದ ಮಾನವ ಶಕ್ತಿ ಅಧ್ಯಯನವನ್ನು ಮಾಡುವುದು ಮತ್ತು ರಾಜ್ಯದ ಕೈಗಾರಿಕಾ ಯೋಜನೆಗಳ ಅನುಷ್ಠಾನದ ಬಗ್ಗೆ ಸರ್ಕಾರದೊಡನೆ ವಿಚಾರ ವಿನಿಮಯ ಮಾಡುವುದು.

ಊ) ನೇರ ನೇಮಕಾತಿ ಮೂಲಕ ಭರ್ತಿ ಮಾಡಬೇಕಾದ 20 ಹುದ್ದೆಗಳ ಕುರಿತು ನೇಮಕಾತಿ ವಿಧಾನದ ಬಗ್ಗೆ ಕೆ.ಐ.ಎ.ಡಿ.ಬಿ.ಯಿಂದ ಪ್ರಸ್ತಾವನೆಯನ್ನು ಸಲ್ಲಿಸುವುದು. ತದನಂತರ, ಪ್ರತ್ಯೇಕವಾಗಿ ಸರ್ಕಾರದಲ್ಲಿ ನಿರ್ಧಾರ ತೆಗೆದುಕೊಳ್ಳಲಾಗುವುದು.

ಋ) ನೇರ ನೇಮಕಾತಿ ಮೂಲಕ ಹುದ್ದೆಗಳನ್ನು ತುಂಬುವವರೆಗೆ ಸದರಿ ಹುದ್ದೆಗಳ ಕಾರ್ಯ ನಿರ್ವಹಿಸುವ ಸಿಬ್ಬಂದಿಯ ಅವಶ್ಯಕತೆ ಇದ್ದಲ್ಲಿ, ಇಲಾಖಾ ವ್ಯಾಪ್ತಿಯಲ್ಲಿರುವ ನಿಗಮ/ಮಂಡಳಿಗಳಿಂದ ಅಧಿಕಾರಿ/ ನೌಕರರನ್ನು ಸರ್ಕಾರದ ಪೂರ್ವಾನುಮೋದನೆಯೊಂದಿಗೆ ನಿಯೋಜನೆ ಮೇರೆಗೆ ಪಡೆಯಲು ಕ್ರಮ ಕೈಗೊಳ್ಳುವುದು.

ೠ) ಮುಂಬಡ್ತಿ ಮುಖಾಂತರ ತುಂಬಬೇಕಾದ ಹುದ್ದೆಗಳನ್ನು ಮಂಡಳಿ ವೃಂದ ಮತ್ತು ನೇಮಕಾತಿ ನಿಯಮಗಳ ಅನುಸಾರ ಪರಿಶೀಲಿಸಿ, ಮಂಜೂರಾದ ಹುದ್ದೆಗಳಿಗೆ ಮುಂಬಡ್ತಿ ನೀಡಲು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1758 ವೆಚ್ಚ–1 2008 ದಿನಾಂಕ: 20–6–2009ರಲ್ಲಿ ನೀಡಲಾದ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಪಿ.ಆರ್. 2661

ಸರ್ಕಾರದ ಅಧೀನ ಕಾರ್ಯದರ್ಶಿ(ಕೈ.ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಇಲಾಖಾ ವಿಚಾರಣೆಯಿಂದ ಮುಕ್ತಗೊಳಿಸಲು ಮತ್ತು ನಿಲಂಬನೆ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವ ಬಗ್ಗೆ ಶ್ರೀ ಎಂ.ಎಸ್. ಅಜಗೋಳ, ರಾಜಸ್ವ ನಿರೀಕ್ಷಕ ಮನವಿ ಕುರಿತು.

**ಓದಲಾಗಿದೆ:** 1) ಮಾನ್ಯ ಕಂದಾಯ ಸಚಿವರ ವರದಿ ದಿನಾಂಕ: 17–11–2008.

2) ಸರ್ಕಾರದ ಆದೇಶ ಸಂ: ಕಂಇ 55 ಎಡಿಇ 2008, ದಿನಾಂಕ: 20–11–2008.

3) ಸರ್ಕಾರದ ಆದೇಶ ಸಂ: ಕಂಇ 79 ಎಟಿಎಸ್ 2005 (ಭಾಗ), ದಿನಾಂಕ: 31–12–2008.

4) ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಪ್ರಸ್ತಾವನೆ ಸಂ:ಸಿಸಿಎ/ಸಿ.ಆರ್/7/2008–09, ದಿನಾಂಕ: 15–01–2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರಲ್ಲಿ ದಿನಾಂಕ: 17–11–2008ರಂದು ಮಾನ್ಯ ಕಂದಾಯ ಸಚಿವರು ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ತಹಶೀಲ್ದಾರ್ ಕಛೇರಿಯನ್ನು ತಪಾಸಣೆ ನಡೆಸಿದ್ದು, ತಪಾಸಣೆ ಸಮಯದಲ್ಲಿ ಕಛೇರಿ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು. ಅಲ್ಲದೇ, ಪಿಂಚಣಿ ಸೌಲಭ್ಯಗಳಾದ ವೃದ್ದಾಪ್ಯ ವೇತನ, ಅಂಗವಿಕಲರ ವೇತನ, ವಿಧವಾ ವೇತನ, ಸಾಮಾಜಿಕ ಭದ್ರತಾಯೋಜನೆ, ಸಂಧ್ಯಾ ಸುರಕ್ಷಾ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ವಿಫಲರಾಗಿ ಕರ್ತವ್ಯ ಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದ ಹಿನ್ನೆಲೆಯಲ್ಲಿ ಕರ್ತವ್ಯ ಲೋಪ ಎಸಗಿದ ಅಧಿಕಾರಿ / ಸಿಬ್ಬಂದಿ ವರ್ಗದವರ ನೇಲೆ ಕ್ರಮ ಜರುಗಿಸಲು ಆದೇಶಿಸಿದ್ದರು. ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ: 20–11–2008ರ ಆದೇಶದಲ್ಲಿ ಶ್ರೀ. ಜಿ.ಹೆಚ್. ನಾಗಹನುಮಯ್ಯ, ತಹಶೀಲ್ದಾರ್, ದಾವಣಗೆರೆ ತಾಲ್ಲೂಕು ಇವರ ವಿರುದ್ಧ ಶಿಸ್ತು ಕ್ರಮ ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾನುಸಾರ 1957ರ ನಿಯಮ 10ರನ್ವಯ ಅವರನ್ನು ಕೂಡಲೆ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇರಿಸಿದ್ದು, ನಂತರ ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ: 31–12–2008ರಂತೆ ಅಮಾನತ್ತಿನಿಂದ ಬಿಡುಗಡೆಗೊಳಿಸಿ, ನಿಯುಕ್ತಿ ಮಾಡಲಾಗಿದೆ. ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ: 15–01–2009ರಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ವಿವರವಾದ ವರದಿಯನ್ನು ಸಲ್ಲಿಸಿ, ಮಾನ್ಯ ಕಂದಾಯ ಸಚಿವರು ದಿನಾಂಕ: 17–11–2008ರಂದು ದಾವಣಗೆರೆ ತಾಲ್ಲೂಕು ಕಛೇರಿಗೆ ಭೇಟಿ ನೀಡಿ ಅಲ್ಲಿನ ಕಾರ್ಯಗಳ ಬಗ್ಗೆ ಪರಿಶೀಲಿಸಿ ನೀಡಿದ ಟಿಪ್ಪಣಿಯಂತೆ, ದಾವಣಗೆರೆ ತಾಲ್ಲೂಕು ಕಛೇರಿಯ ಈ ಕೆಳಗಿನ ಸಿಬ್ಬಂದಿಗಳು ಕರ್ತವ್ಯ ಚ್ಯುತಿ ಎಸಗಿದ್ದು, ಅವರ ಲೊಪದೋಷಗಳ ಬಗ್ಗೆ ಹಾಗೂ ವಿಳಂಬ ನೀತಿ ಅನುಸರಿಸಿದ ಬಗ್ಗೆ ಕ್ರಮ ಕೈಗೊಳ್ಳಲು ತಿಳಿಸಿದಂತೆ ದಾವಣಗೆರೆ ಜಿಲ್ಲಾಧಿಕಾರಿಗಳು ಈ ಕೆಳಕಂಡ ಸಿಬ್ಬಂದಿಗಳನ್ನು ಆದೇಶ ಸಂಖ್ಯೆ: ಪ್ರಕರಣ ಸಂ:ಸಿಸಿಎ/ಸಿ.ಆರ್/7/08–09, ದಿನಾಂಕ: 21–11–2008ರಲ್ಲಿ ಅಮಾನತ್ತಿನಲ್ಲಿಟ್ಟು ಕ್ರಮ ಕೈಗೊಂಡಿರುತ್ತಾರೆ.

1) ಶ್ರಿ ಎಂ.ಎಸ್. ಅಜುಗೋಳ, ಕಂದಾಯ ನಿರೀಕ್ಷಕ, ಕಸಬಾ ಹೋಬಳಿ, ದಾವಣಗೆರೆ.
2) ಶ್ರೀ ಧನಂಜಯ, ಗ್ರಾಮಲೆಕ್ಕಿಗ, ಕಸಬಾ ಫಿರ್ಕಾ, ದಾವಣಗೆರೆ
3) ಶ್ರೀ ಎಂ.ಜಿ. ಬಾರಿಕೆರ, ಸರ್ವೆ ಸೂಪರ್‌ವೈಸರ್, ತಾಲ್ಲೂಕು ಕಛೇರಿ, ದಾವಣಗೆರೆ.

ಹಾಗೂ ಈ ಕೆಳಕಂಡ ಸಿಬ್ಬಂದಿಗಳ ಮೇಲೆ ಕರ್ತವ್ಯ ಲೋಪದ ಕುರಿತು ಶಿಸ್ತಿನ ಕ್ರಮ ಕೈಗೊಳ್ಳಲು ಕಾರಣ ಕೇಳಿ ದಿನಾಂಕ: 26–11–2008ರಂದು ಜಿಲ್ಲಾಧಿಕಾರಿಗಳು ನೋಟೀಸ್ ನೀಡಿದ್ದು, ಸದರಿ ಕಾರಣ ಕೇಳುವ ನೋಟೀಸಿಗೆ ದಿನಾಂಕ: 05–12–2008ರಂದು ಎಲ್ಲರೂ ಸಮಜಾಯಿಷಿಯನ್ನು ಸಮುಚಿತ ಮಾರ್ಗದನ್ವಯ ಸಲ್ಲಿಸಿರುತ್ತಾರೆ.

1) ಶ್ರೀಮತಿ, ಜಿ.ಬಿ. ಜವಳಕರ್, ತಾಲ್ಲೂಕು ಶಿರಸ್ತೇದಾರ್
2) ಶ್ರೀಮತಿ ಎಸ್. ಪದ್ಮಕುಮಾರಿ, ಆರ್.ಆರ್. ಶಿರಸ್ತೇದಾರ್
3) ಶ್ರಿ ಆರ್. ವೆಂಕಟಮ್ಮ, ಹೆಚ್ಚುವರಿ ಶಿರಸ್ತೇದಾರ್
4) ಶ್ರೀ ಹೆಚ್.ಎಸ್. ರಾಮಣ್ಣ, ಉಪತಹಶೀಲ್ದಾರ್, ಮಾಯಕೊಂಡ
5) ಶ್ರೀಮತಿ ಎಸ್. ಸುಜಾತ, ದ್ವಿದಸ
6) ಶ್ರೀ ಎಂ. ಚನ್ನವೀರಸ್ವಾಮಿ, ದ್ವಿದಸ
7) ಶ್ರೀಮತಿ ಎಂ. ಮಂಜುಳ ದ್ವಿದಸ
8) ಶ್ರೀ ಬಿ. ಲೋಕೇಶ್, ದ್ವಿದಸ
9) ಶ್ರೀಮತಿ ಎಂ.ಟಿ. ಸವಿತ ಕೊಡವಲ್, ದ್ವಿದಸ
10) ಶ್ರೀಮತಿ ಸರಸ್ವತಿ ಹ.ಬಾರ್ಕಿ, ಗ್ರಾ.ಲೆ
11) ಶ್ರೀಮತಿ ಬಿ.ಎ.ಕರಿಬಸಮ್ಮ ಗ್ರಾ.ಲೆ

ಜಿಲ್ಲಾಧಿಕಾರಿ, ದಾವಣಗೆರೆರವರು ಪ್ರಸ್ತಾಪಿತ ವಿಷಯದ ಬಗ್ಗೆ ಖುದ್ದಾಗಿ ಪರಿಶೀಲಿಸಿದ್ದಾಗಿ ಹಾಗೂ ತಾಲ್ಲೂಕು ಕಛೇರಿಯ ವಿವಿಧ ಶಾಖೆಗಳಲ್ಲಿ ಜುಲೈ 2008ರಿಂದ ಡಿಸೆಂಬರ್ 2008ರ ವರೆಗೆ ಕಾಗದ ಪತ್ರದಲ್ಲಿ ವಿಲೇವಾರಿ ಆಗಿರುವುದು ತಮ್ಮ ಗಮನಕ್ಕೆ ಬಂದಿರುತ್ತದೆಯೆಂದು ಸಿಬ್ಬಂದಿಯ ಕೊರತೆಯಿಂದ ಅರ್ಜಿಗಳನ್ನು ವಿಲೇ ಮಾಡುವಲ್ಲಿ ವಿಳಂಬವಾಗಿದ್ದು, ಪ್ರಸ್ತುತ ಈಗ ಬಾಕಿ ಇರುವ ಅರ್ಜಿಗಳನ್ನು ಇತ್ಯರ್ಥ ಪಡಿಸಿರುವುದಾಗಿ ಹಾಗೂ ಈ ಹಿಂದೆ ಪರಿಷ್ಕರಿಸಿದ ಪ್ರಕರಣಗಳು ಪುನಃ ಬರುತ್ತಿದ್ದು, ಅತೀ ಹೆಚ್ಚು ಪ್ರಮಾಣದಲ್ಲಿ ವಿಲೇವಾರಿ ಆಗುತ್ತಿರುವುದು ಕಂಡು ಬಂದಿರುತ್ತದೆ. ಈ ರೀತಿ ಅತೀ ಹೆಚ್ಚು ಪ್ರಮಾಣದಲ್ಲಿ ವಿಲೇವಾರಿ ಆಗುತ್ತಿರುವುದು ಕಂಡು ಬಂದಿರುತ್ತದೆ. ಈ ರೀತಿ ಅತೀ ಹೆಚ್ಚು ಪ್ರಮಾಣದಲ್ಲಿ ಕಛೇರಿಯಲ್ಲಿ ಸ್ವೀಕೃತವಾದ ಅರ್ಜಿಗಳು ವಿಲೇವಾರಿಗಾಗಿ ನೌಕರರು ಕೆಲಸದ ಅವಧಿ ಮುಗಿದ ನಂತರ ಹಾಗೂ ರಜಾ ದಿನಗಳಲ್ಲಿ ಕೆಲಸ ಮಾಡಿದರೂ ಸಹ ಮೇಲ್ಕಂಡ ಕಾರಣಗಳಿಂದ ಕೆಲಸದ ಪ್ರಗತಿಯಲ್ಲಿ ಅಲ್ಲಲ್ಲಿ ಸಣ್ಣ ದೋಷಗಳು ಕಂಡು ಬಂದಿರುತ್ತದೆ. ಎಂದು ಈ ಹಿನ್ನಲೆಯಲ್ಲಿ, ನೌಕರರ ಮನೋ ಸ್ಥೈರ್ಯ ಹೆಚ್ಚಿಸಲು ಹಾಗೂ ಇನ್ನು ಹೆಚ್ಚು ಕಾಳಜಿಯಿಂದ ಹಾಗೂ ಜವಾಬ್ದಾರಿಯಿಂದ ಕೆಲಸ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿ ಸದರಿ ನೌಕರರ ಮೇಲೆ ಕರ್ತವ್ಯ ಲೋಪದ ಬಗ್ಗೆ ಇಲಾಖಾ ವಿಚಾರಣೆ ಪ್ರಕ್ರಿಯೆಯನ್ನು ಕೈಬಿಟ್ಟು, ಇನ್ನು ಮುಂದೆ ಈ ತರಹದ ಲೋಪದೋಷಗಳಿಗೆ ಅವಕಾಶ ನೀಡದಂತೆ ಎಚ್ಚರಿಕೆಯನ್ನು ನೀಡಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಅವರ ವರದಿಯನ್ನು ಒಪ್ಪಿ, ಮೇಲ್ಕಂಡ ಸಿಬ್ಬಂದಿಗಳಿಗೆ ಇನ್ನು ಮುಂದೆ ಸಾರ್ವಜನಿಕ ಕೆಲಸಗಳನ್ನು ಆಸಕ್ತಿಯಿಂದ ನಿರ್ವಹಿಸಲು ಎಚ್ಚರಿಕೆ ನೀಡಿ ಅವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 347 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರವು ದಾವಣಗೆರೆ ತಹಶೀಲ್ದಾರ್ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದ ಈ ಕೆಳಕಂಡ 14ಜನ ಸಿಬ್ಬಂದಿಗಳಿಗೆ ಇನ್ನು ಮುಂದೆ ಸಾರ್ವಜನಿಕರ ಕೆಲಸ ಕಾರ್ಯಗಳನ್ನು ಆಸಕ್ತಿಯಿಂದ ನಿರ್ವಹಿಸುವಂತೆ ಎಚ್ಚರಿಕೆ ನೀಡಿ ಅವರ ವಿರುದ್ಧ ಹೂಡಲು ಉದ್ದೇಶಿಸಲಾಗಿದ್ದ ಇಲಾಖಾ ವಿಚಾರಣೆಯಿಂದ ಈ ಪ್ರಕರಣದ ಮಟ್ಟಿಗೆ ಕೈಬಿಟ್ಟು ಆದೇಶಿಸಿದೆ.

1) ಶ್ರೀ ಎಂ.ಎಸ್. ಅಜಗೋಳ, ಕಂದಾಯ ನಿರೀಕ್ಷಕ, ಕಸಬಾ ಹೋಬಳಿ, ದಾವಣಗೆರೆ
2) ಶ್ರೀ ಧನಂಜಯ, ಗ್ರಾಮಲೆಕ್ಕಿಗ ಕಸಬಾ ಫಿರ್ಕಾ, ದಾವಣಗೆರೆ
3) ಶ್ರೀ ಎಂ.ಜಿ. ಬಾರಿಕೆರ, ಸರ್ವೆ ಸೂಪರ್‌ವೈಸರ್, ತಾಲ್ಲೂಕು ಕಛೇರಿ, ದಾವಣಗೆರೆ.
4) ಶ್ರೀಮತಿ, ಜಿ.ಬಿ. ಜವಳಕರ್, ತಾಲ್ಲೂಕು ಶಿರಸ್ತೇದಾರ್
5) ಶ್ರೀಮತಿ ಎಸ್. ಪದ್ಮಕುಮಾರಿ, ಆರ್.ಆರ್. ಶಿರಸ್ತೇದಾರ್
6) ಶ್ರಿ ಆರ್. ವೆಂಕಟಮ್ಮ, ಹೆಚ್ಚುವರಿ ಶಿರಸ್ತೇದಾರ್
7) ಶ್ರೀ ಹೆಚ್.ಎಸ್. ರಾಮಣ್ಣ, ಉಪತಹಶೀಲ್ದಾರ್ ಮಾಯಕೊಂಡ
8) ಶ್ರೀಮತಿ ಎಸ್. ಸುಜಾತ, ದ್ವಿದಸ
9) ಶ್ರೀ ಎಂ. ಚನ್ನವೀರಸ್ವಾಮಿ, ದ್ವಿದಸ
10) ಶ್ರೀಮತಿ ಎಂ. ಮಂಜುಳ ದ್ವಿದಸ
11) ಶ್ರೀ ಬಿ. ಲೋಕೇಶ್, ದ್ವಿದಸ
12) ಶ್ರೀಮತಿ ಎಂ.ಟಿ. ಸವಿತ ಕೊಡವಲ್, ದ್ವಿದಸ
13) ಶ್ರೀಮತಿ ಸರಸ್ವತಿ .ಬಾರ್ಕಿ, ಗ್ರಾ.ಲೆ
14) ಶ್ರೀಮತಿ ಬಿ.ಎ.ಕರಿಬಸಮ್ಮ ಗ್ರಾ.ಲೆ

ಈ ಎಲ್ಲಾ ಸಿಬ್ಬಂದಿಗಳಿಗೆ ಒಂದು ದಿನವನ್ನು ಎಲ್.ಡಬ್ಲ್ಯೂ.ಎ (ವೇತನ ರಹಿತ ರಜೆ) ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 2671 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ,

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ:**

2009ನೇ ಸೆಪ್ಟೆಂಬರ್ ಮಾಹೆಯ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ಮಾಹೆಯ ಮೊದಲ ವಾರದಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬಿದ್ದ ಭಾರಿ ಮಳೆಯಿಂದ ಉಂಟಾದ ಪ್ರವಾಹ ಪರಿಸ್ಥಿತಿಯಿಂದಾಗಿ ಬಾಗಲಕೋಟೆ, ಬಿಜಾಪುರ, ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಧಾರವಾಡ, ಹಾವೇರಿ, ಬೆಳಗಾಂ, ಉತ್ತರ ಕನ್ನಡ, ಚಿತ್ರದುರ್ಗ, ದಾವಣಗೆರೆ, ಹಾಗೂ ಬೀದರ್ ಜಿಲ್ಲೆಗಳಲ್ಲಿ ಮನೆಹಾನಿ ಮತ್ತು ಬೆಳೆಹಾನಿ ಉಂಟಾಗಿದೆ. ಬೆಳೆಹಾನಿ ಮನೆಹಾನಿಗಳಿಗೆ, ತುರ್ತು ಪರಿಹಾರ ಕಾರ್ಯ ಕೈಗೊಳ್ಳಲು ಹಣ ಬಿಡುಗಡೆ ಮಾಡುವ ಅವಶ್ಯಕತೆಯಿರುವುದನ್ನು ಪರಿಗಣಿಸಿ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 12ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಈ ಕೆಳಕಂಡ ಜಿಲ್ಲೆಗಳಲ್ಲಿ ಇನ್ನು ಮನೆಹಾನಿ ಹಾಗೂ ಬೆಳೆಹಾನಿ ಪರಿಹಾರ ನೀಡಬೇಕಾಗಿರುವುದರಿಂದ, ಪ್ರಕೃತಿ ವಿಕೋಪ ಪರಿಹಾರ ನೀಧಿಯಿಂದ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಒಟ್ಟು ರೂ. 18,000.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ | ಜಿಲ್ಲೆಯ ಹೆಸರು | ಮನೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಒಟ್ಟು (ರೂ. ಲಕ್ಷಗಳಲ್ಲಿ) |
|---|---|---|---|---|
| 1. | ಬಾಗಲಕೋಟೆ | 2500–00 | 600–00 | 3100–00 |
| 2. | ಬಿಜಾಪುರ | –– | 2050–00 | 2050–00 |
| 3. | ರಾಯಚೂರು | 2500–00 | 500–00 | 3000–00 |
| 4. | ಕೊಪ್ಪಳ | 1000–00 | 1000–00 | 2000–00 |
| 5. | ಬಳ್ಳಾರಿ | 500–00 | 1500–00 | 2000–00 |
| 6. | ಗುಲ್ಬರ್ಗಾ | 600–00 | 1000–00 | 1600–00 |
| 7. | ಬೆಳಗಾಂ | –– | 1850–00 | 1850–00 |
| 8. | ಧಾರವಾಡ | 800–00 | –– | 800–00 |
| 9. | ಹಾವೇರಿ | –– | 800–00 | 800–00 |
| 10. | ದಾವಣಗೆರೆ | 100–00 | 700–00 | 800–00 |
| | **ಒಟ್ಟು** | **8000–00** | **10,000–00** | **18000–00** |

(ರೂ. ಹದಿನೆಂಟು ಸಾವಿರ ಲಕ್ಷಗಳು ಮಾತ್ರ)

1) ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು. ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಉಪಯೋಗಿಸುವುದು.

2) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

3) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

4) ಈ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

5) ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

6) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 692 ವೆಚ್ಚ–7/2009 ದಿನಾಂಕ:9.11.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ದೇಸಾಯಿ**

ಪಿ.ಆರ್. 2672

ವಿಶೇಷ ಅಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು)

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆಯಿಂದ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ,

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಜೆಸ್ಕಾಂ, ಇವರಿಂದ ಬಂದಿರುವ ಬೇಡಿಕೆ ಪತ್ರ.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಬಿದ್ದ ಭಾರಿ ಮಳೆಯಿಂದ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಉಂಟಾಗಿರುವ ಹಾನಿಗಳಿಗೆ ತುರ್ತ ಪರಿಹಾರ ಕಾರ್ಯಕೈಗೊಳ್ಳಲು ಮೇಲೆ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಜೆಸ್ಕಾಂ, ಇವರು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಅವರ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 (ಭಾ), ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಭಾರಿ ಮಳೆಯಿಂದ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ಆಗಿರುವ ಹಾನಿಗಳಿಗೆ ತುರ್ತು ದುರಸ್ತಿ ಕಾರ್ಯ/ ಪರಿಹಾರ ಕಾರ್ಯಕೈಗೊಳ್ಳಲು ಜೆಸ್ಕಾಂ ವ್ಯಾಪ್ತಿಯಲ್ಲಿ ಬರುವ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಒಟ್ಟು ರೂ. 2000–00 (ರೂ. ಎರಡು ಸಾವಿರ ಲಕ್ಷಗಳು ಮಾತ್ರ) ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂಖ್ಯೆ | ಜಿಲ್ಲೆ ಹೆಸರು | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | ಬೀದರ್ | 69.00 |
| 2. | ಗುಲ್ಬರ್ಗಾ | 632.00 |
| 3. | ರಾಯಚೂರು | 696.00 |
| 4 | ಬಳ್ಳಾರಿ | 603.00 |
| **ಒಟ್ಟು** | | **2000.00** |

(ರೂ. ಎರಡು ಸಾವಿರ ಲಕ್ಷಗಳು ಮಾತ್ರ)

1) ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ವೆಚ್ಚ ಮಾಡುವುದು.

i) ಪ್ರಕೃತಿ ವಿಕೋಪ ಪರಿಹಾರ ಮಾರ್ಗಸೂಚಿಗಳ ಐಟಂ ನಂ.18ರಲ್ಲಿ ಇರುವ immediate restoration of power supply ಗೆ ಸಂಬಂಧಪಟ್ಟ ಐಟಂಗಳಿಗೆ ಮಾತ್ರ ಹಣ ಬಿಡುಗಡೆ ಮಾಡುವುದು.

ii) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಯನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.

iii) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ಕಾರ್ಯಗಳನ್ನು ಕೈಗೊಳ್ಳುವುದು.

2) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಮಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್ ಪಿ.ಡಿಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

3) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

4) ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ ಸುತ್ತೋಲೆಗಳನ್ನು ಪಾಲಿಸುವುದು.

5) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 692 ವೆಚ್ಚ–7/2009 ದಿನಾಂಕ: 9–11–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು –2)

ಪಿ.ಆರ್. 2673

**ವಿಷಯ:** 2009–10ನೇ ಸಾಲಿನಲ್ಲಿ ಭಾರಿ ಮಳೆ ಹಾಗೂ ಪ್ರವಾಹದ ವಿಕೋಪಗಳಿಂದ ಆಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ,

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ.

**ಪ್ರಸ್ತಾವನೆ:**

2009ನೇ ಸೆಪ್ಟೆಂಬರ್ ಮಾಹೆಯ ಅಂತ್ಯದಲ್ಲಿ ಹಾಗೂ ಅಕ್ಟೋಬರ್ ಮಾಹೆಯ ಮೊದಲ ವಾರದಲ್ಲಿ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬಿದ್ದ ಭಾರಿ ಮಳೆಯಿಂದ ಉಂಟಾದ ಪ್ರವಾಹ ಪರಿಸ್ಥಿತಿಯಿಂದಾಗಿ ಬಾಗಲಕೋಟೆ, ಬಿಜಾಪುರ, ರಾಯಚೂರು, ಕೊಪ್ಪಳ, ಬಳ್ಳಾರಿ, ಗುಲ್ಬರ್ಗಾ, ಧಾರವಾಡ, ಹಾವೇರಿ, ಬೆಳಗಾಂ, ಉತ್ತರ ಕನ್ನಡ, ಚಿತ್ರದುರ್ಗ, ದಾವಣಗೆರೆ, ಹಾಗೂ ಬೀದರ್ ಜಿಲ್ಲೆಗಳಲ್ಲಿ ಮನೆಹಾನಿ ಮತ್ತು ಬೆಳೆಹಾನಿ ಉಂಟಾಗಿದೆ. ಜಿಲ್ಲಾಧಿಕಾರಿಗಳು, ಬೆಳೆಹಾನಿ ಹಾಗೂ ಮನೆಹಾನಿಗೆ, ಪರಿಹಾರಗಳಿಗೆ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲು ತೀರ್ಮಾನಿಸಿದೆ.

| ಕ್ರ. ಸಂ | ಜಿಲ್ಲೆಯ ಹೆಸರು | ಮನೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಬಾಗಲಕೋಟೆ | 2500.00 | 3934.00 |
| 2. | ಬಿಜಾಪುರ | -- | 5420.00 |
| 3. | ರಾಯಚೂರು | 2500.00 | 2500.00 |
| 4. | ಕೊಪ್ಪಳ | 1000.00 | 3800.00 |
| 5. | ಬಳ್ಳಾರಿ | 500.00 | 600.00 |
| 6. | ಗುಲ್ಬರ್ಗಾ | 600.00 | 1500.00 |
| 7. | ಬೆಳಗಾಂ | -- | 5000.00 |
| 8. | ಧಾರವಾಡ | 1000.00 | 500.00 |
| 9. | ಹಾವೇರಿ | -- | 2200.00 |
| 10. | ದಾವಣಗೆರೆ | 100.00 | 456.00 |
| **ಒಟ್ಟು** | | **8200.00** | **25910.00** |

ಸರ್ಕಾರದ ಆದೇಶ ಸಂಖ್ಯೆ. ಕಂಇ 137 ಟಿಎನ್ಆರ್ 2009 ದಿನಾಂಕ: 12–11–2009ರಲ್ಲಿ ಬೆಳೆಹಾನಿ ಹಾಗೂ ಮಳೆಹಾನಿಗೆ ತುರ್ತು ಪರಿಹಾರ ಕಾರ್ಯ ಕೈಗೊಳ್ಳಲು ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿದೆ.

| ಕ್ರ. ಸಂ | ಜಿಲ್ಲೆಯ ಹೆಸರು | ಮನೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಒಟ್ಟು (ರೂ. ಲಕ್ಷಗಳಲ್ಲಿ) |
|---|---|---|---|---|
| 1. | ಬಾಗಲಕೋಟೆ | 2500–00 | 600–00 | 3100–00 |
| 2. | ಬಿಜಾಪುರ | -- | 2050–00 | 2050–00 |
| 3. | ರಾಯಚೂರು | 2500–00 | 500–00 | 3000–00 |
| 4. | ಕೊಪ್ಪಳ | 1000–00 | 1000–00 | 2000–00 |
| 5. | ಬಳ್ಳಾರಿ | 500–00 | 1500–00 | 2000–00 |
| 6. | ಗುಲ್ಬರ್ಗಾ | 600–00 | 1000–00 | 1600–00 |
| 7. | ಬೆಳಗಾಂ | -- | 1850–00 | 1850–00 |
| 8. | ಧಾರವಾಡ | 800–00 | -- | 800–00 |
| 9. | ಹಾವೇರಿ | -- | 800–00 | 800–00 |
| 10. | ದಾವಣಗೆರೆ | 100–00 | 700–00 | 800–00 |
| **ಒಟ್ಟು** | | **8000–00** | **10,000–00** | **18000–00** |

ಈಗ ಕೆಳಕಂಡಂತೆ ಬೆಳೆಹಾನಿಗೆ ಪರಿಹಾರ ನೀಡಲು ಕೆಳಕಂಡಂತೆ ಅನುದಾನ ಬಿಡುಡಗೆ ಮಾಡಲು ಬಾಕಿ ಇರುತ್ತದೆ.

| ಕ್ರ. ಸಂ | ಜಿಲ್ಲೆಯ ಹೆಸರು | ಮನೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಬಾಗಲಕೋಟೆ | | 3334.00 |
| 2. | ಬಿಜಾಪುರ | | 3370.00 |
| 3. | ರಾಯಚೂರು | | 2000.00 |
| 4. | ಕೊಪ್ಪಳ | | 2800.00 |
| 6. | ಗುಲ್ಬರ್ಗಾ | | 500.00 |
| 7. | ಬೆಳಗಾಂ | | 3150.00 |
| 8. | ಧಾರವಾಡ | 200.00 | 500.00 |
| 9. | ಹಾವೇರಿ | | 1400.00 |
| **ಒಟ್ಟು** | | **200.00** | **17054.00** |

ಮೇಲಿನಂತೆ ಅನುದಾನ ಬಿಡುಗಡೆ ಮಾಡಿದರೆ ಜಿಲ್ಲಾಧಿಕಾರಿಗಳು ಮನೆಹಾನಿ ಪರಿಹಾರ ಬೆಳೆಹಾನಿ ಪರಿಹಾರ ನೀಡಲು ಕೋರಿರುವಂತೆ ಪೂರ್ತಿ ಹಣ ಬಿಡುಗಡೆ ಮಾಡಿದಂತಾಗುವುದು. ಈ ಹಿನ್ನೆಲೆಯಲ್ಲಿ ಸರ್ಕಾರವು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಡಗೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಈ ಕೆಳಕಂಡ ಪ್ರವಾಹ ಪೀಡಿತ ಜಿಲ್ಲೆಗಳಲ್ಲಿ ಇನ್ನೂ ಬೆಳೆಹಾನಿ ಪರಿಹಾರ ನೀಡಬೇಕಾಗಿರುವುದರಿಂದ, ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಒಟ್ಟು ರೂ. 18254.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ | ಜಿಲ್ಲೆಯ ಹೆಸರು | ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೆ) | | ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) | ಒಟ್ಟು (ರೂ. ಲಕ್ಷಗಳಲ್ಲಿ) |
|---|---|---|---|---|---|
| | | ಮನೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | ಬೆಳೆ ಹಾನಿ ಪರಿಹಾರಕ್ಕಾಗಿ (ರೂ. ಲಕ್ಷಗಳಲ್ಲಿ) | |
| 1. | ಬಾಗಲಕೋಟೆ | –– | 334.00 | 3000.00 | 3334.00 |
| 2. | ಬಿಜಾಪುರ | –– | 300.00 | 3070.00 | 3370.00 |
| 3. | ರಾಯಚೂರು | –– | –– | 2000.00 | 2000.00 |
| 4. | ಕೊಪ್ಪಳ | –– | –– | 2800.00 | 2800.00 |
| 5. | ಗುಲ್ಬರ್ಗಾ | –– | 1000.00 | 500.00 | 1500.00 |
| 6. | ಬೆಳಗಾಂ | –– | 310.00 | 2840.00 | 3150.00 |
| 7. | ಧಾರವಾಡ | 200.00 | –– | 500.00 | 700.00 |
| 8. | ಹಾವೇರಿ | –– | –– | 1400.00 | 1400.00 |
| **ಒಟ್ಟು** | | **200.00** | **1944.00** | **16110.00** | **18254.00** |

(ರೂ. ಹದಿನೆಂಟು ಸಾವಿರದ ಇನ್ನೂರ ಐವತ್ತು ನಾಲ್ಕು ಲಕ್ಷಗಳು ಮಾತ್ರ)

1) ಕೇಂದ್ರ ಸರ್ಕಾರವು ಹೊರಡಿಸಿರುವ ಸಿಆರ್‌ಎಫ್/ಎನ್‌ಸಿಸಿಎಫ್ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು. ಅನುದಾನವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕೆ ಮಾತ್ರ ಉಪಯೋಗಿಸುವುದು.

2) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

3) ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿ.ಡಿ.ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

4) ಈ ಅನುದಾನವನ್ನು ಖಜಾನೆಯಿಂದ ಸೆಳೆಯುವಾಗ ಈ ಆದೇಶದಲ್ಲಿ ನಮೂದಿಸಿರುವ ಲೆಕ್ಕಶೀರ್ಷಿಕೆಯನ್ನು ಸರಿಯಾಗಿ ನಮೂದಿಸಿ ಅನುದಾನ ಸೆಳೆಯತಕ್ಕದ್ದು.

5) ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

6) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 692 ವೆಚ್ಚ–7/2009 ದಿನಾಂಕ:9.11.2009ರಲ್ಲಿ ಹಾಗೂ ಟಿಪ್ಪಣಿ ಸಂಖ್ಯೆ: 692–7/2009 ದಿನಾಂಕ: 06–10–2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರಾಮಚಂದ್ರಯ್ಯ**

ಪಿ.ಆರ್. 2674

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ವಸತಿ ಸಚಿವಾಲಯ

**ವಿಷಯ:** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ಜಮೀನು ಖರೀದಿಗಾಗಿ ಅನುದಾನ ಬಿಡುಡಗೆ ಕುರಿತು.

**ಓದಲಾಗಿದೆ:** ಸರ್ಕಾರದ ಆದೇಶ ಸಂ. ಆಇ 126 ಬಿಆರ್‌ಎಸ್ 09, ದಿನಾಂಕ 12–11–09

**ಪ್ರಸ್ತಾವನೆ:**

ಉತ್ತರ ಕರ್ನಾಟಕ ಜಿಲ್ಲೆಯಲ್ಲಿ ದಿನಾಂಕ: 29–09–09ರಿಂದ 4–10–09ರ ವರೆಗೂ ಸುರಿದ ಧಾರಾಕಾರ ಮಳೆಯಿಂದ ಹಾಗೂ ಪ್ರವಾಹದಿಂದ ಮನೆಗಳನ್ನು ಕಳೆದುಕೊಂಡವರಿಗೆ ಸುರಕ್ಷಿತ ಸ್ಥಳಗಳಲ್ಲಿ ಮನೆಗಳನ್ನು ಕಟ್ಟಲು ನಿವೇಶನಗಳಿಗಾಗಿ ಜಮೀನು ಖರೀದಿಸಲು ಉತ್ತರ ಕರ್ನಾಟಕದ 11 ಜಿಲ್ಲೆಗಳಿಗೆ ಈವರೆಗೆ ಒಟ್ಟು 100.42 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ. ಜಮೀನು ಖರೀದಿ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಬಳ್ಳಾರಿ, ರಾಯಚೂರು, ಹಾಗೂ ಗದಗ ಜಿಲ್ಲಾಧಿಕಾರಿಗಳು ಕೂಡಲೇ ಇನ್ನು ಹೆಚ್ಚಿನ ಮೊತ್ತ ಬಿಡುಗಡೆ ಮಾಡಲು ಕೋರಿರುವುದರಿಂದ, ಈ ಕೆಳಗಿನಂತೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಲು ಪ್ರಸ್ತಾಪಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್‌ಎವೈ 2009, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಇತ್ತೀಚೆಗೆ ಬಿದ್ದ ಭಾರಿ ಮಳೆ ಹಾಗೂ ಪ್ರವಾಹದಿಂದ ಮನೆಗಳನ್ನು ಕಳೆದುಕೊಂಡವರಿಗೆ ಮನೆಗಳನ್ನು ನಿರ್ಮಿಸಲು ನಿವೇಶನಗಳಿಗಾಗಿ ಜಮೀನು ಖರೀದಿಸಲು ಬಳ್ಳಾರಿ ಜಿಲ್ಲೆಗೆ 5.00 ಕೋಟಿ ರೂ.ಗಳು ರಾಯಚೂರು ಜಿಲ್ಲೆಗೆ 10.00 ಕೋಟಿ ರೂ.ಗಳು ಹಾಗೂ ಗದಗ ಜಿಲ್ಲೆಗೆ 2.50 ಕೋಟಿ ರೂ.ಗಳು ಹೀಗೆ ಒಟ್ಟು 17.50 ಕೋಟಿ ರೂ.ಗಳನ್ನು (ಹದಿನೇಳು ಕೋಟಿ ಐವತ್ತು ಲಕ್ಷ ರೂ.ಗಳು ಮಾತ್ರ) ಲೆಕ್ಕಶಿರ್ಷಿಕೆ 2216–03–102–0–01–59(ಯೋಜನೆ) ಅಡಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಪಡೆಯಲು ಬಿಡುಗಡೆ ಮಾಡಲಾಗಿದೆ.

2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರಿದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

3) ಆರ್ಥಿಕ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಆಇ 126 ಬಿಆರ್‌ಎಸ್ 09, ದಿನಾಂಕ: 12–11–09ರ ಸಹಮತಿಯ ಮೇರೆಗೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2675

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ..

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ 42/ಹೆಚ್‌ಎಎಂ/1999, ದಿನಾಂಕ: 10–05–2000.

2) ಸರ್ಕಾರದ ಆದೇಶ ಸಂ. ವಇ 18/ಹೆಚ್‌ಎಎಸ್/2008, ದಿನಾಂಕ: 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರೀಶಿಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 43 ಹೆಚ್‌ಎಎಸ್ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಕುಮಾರ್ ಬಿನ್ ಲೇ:ಗಂಗಾಧರಪ್ಪ ರಾಮದೇವರ ಬೀದಿ, ಕನಮನಹಟ್ಟಿ ತರೀಕೆರೆ | ಹಿಂದುಳಿದ ವರ್ಗ |
| 2. | ಶ್ರೀಮತಿ ಕೋಮಲ, ಕೋಂ ಮಂಜುನಾಥ್, ಎಲ್.ಐ.ಜಿ.–2. ಹೌಸಿಂಗ್ ಬೋರ್ಡ್ ತರೀಕೆರೆ. | ಸಾಮಾನ್ಯ |
| 3. | ಶ್ರೀ ನಾಗರಾಜ್ ನಾಯಕ ಬಿನ್ ತಿಮ್ಮಪ್ಪನಾಯಕ, ಪಾಳೇಗಾರ್ ಕ್ಯಾಂಪ್, ತರೀಕೆರೆ. | ಪರಿಶಿಷ್ಟ ಪಂಗಡ |
| 4. | ಶ್ರೀ ಬುಡೇನ್ ಭಾಷಾ ಬಿನ್ ತಾಜ್ ಪೀರ್ ಸಾಬ್, ಕುಂಬಾರಬೀದಿ, ತರೀಕೆರೆ. | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2676

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಗುರುಮಿಠಕಲ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/42/ ಹೆಚ್ ಎಎಂ/1999, ದಿನಾಂಕ 10–05–2000.

2) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/18/ ಹೆಚ್ ಎಎಸ್/2008, ದಿನಾಂಕ 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಅದೇಶವನ್ನು ಮುಂದುವರೆಸುತ್ತಾ. ಗುಲ್ಬರ್ಗಾ ಜಿಲ್ಲೆಯ ಗುರುಮಿಠಕಲ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 53 ಹೆಚ್ ಎಎಸ್ 2009, ಬೆಂಗಳೂರು, ದಿನಾಂಕ 18ನೇ ನವೆಂಬರ್ 2009**

ಗುಲ್ಬಾರ್ಗಾ ಜಿಲ್ಲೆಯ ಗುರುಮಿಠಕಲ್ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ವೆಂಕಟರಾಮೂಲು ಬಿನ್ ಕನಕಪ್ಪ, ಸಿಹಿ ನೀರ ಭಾವಿ, ಗುರುಮಿಠಕಲ್ | ಹಿಂದುಳಿದ ವರ್ಗ |
| 2 | ಶ್ರೀಮತಿ ಅಂಜಲಮ್ಮ ಕೋಂ ವೆಂಕಟರೆಡ್ಡಿ, ಸಿಹಿ ನೀರ ಭಾವಿ, ಗುರುಮಿಠಕಲ್ | ಸಾಮಾನ್ಯ(ಮಹಿಳೆ) |
| 3 | ಶ್ರೀ ಸೈಯದ್ ಹನೀಫ್ ಜಂಗಡಕೇರಿ, ಗುರುಮಿಠಕಲ್ | ಅಲ್ಪಸಂಖ್ಯಾತ |
| 4 | ಶ್ರೀಮತಿ ವಿರಾಮಣಿ ಕೋಂ ರವಿ ನಾರಯಣಪುರ, ಗುರುಮಿಠಕಲ್ | ಪರಿಶಿಷ್ಟ ಪಂಗಡ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2677

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಬೆಳಗಾವಿ ಜಿಲ್ಲೆ, ಬೆಳಗಾವಿ ಉತ್ತರ ವಿಧಾನ ಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/42/ ಹೆಚ್ ಎಎಂ/1999, ದಿನಾಂಕ 10–05–2000.

2) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/18/ ಹೆಚ್ ಎಎಸ್/2008, ದಿನಾಂಕ 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬೆಳಗಾವಿ ಜಿಲ್ಲೆ, ಬೆಳಗಾವಿ ಉತ್ತರ ವಿಧಾನ ಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ 60 ಹೆಚ್ ಎಎಸ್ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಬೆಳಗಾವಿ ಜಿಲ್ಲೆಯ, ಬೆಳಗಾವಿ ಉತ್ತರ ವಿಧಾನ ಸಭಾ ಕ್ಷೇತ್ರದ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಗುರುಲಿಂಗ್ ಕಡಲಾಸಕರ್, ಟಿ.ವಿ. ಸೆಂಟರ್ ಹನುಮಾನ್ ನಗರ ಬೆಳಗಾವಿ | ಪರಿಶಿಷ್ಟ ಜಾತಿ |
| 2 | ಶ್ರೀಮತಿ ಸ್ನೆಹಲ್ ಮಾರುತಿ ಕೋಲೆ, ನಂ. 72, ಮೊದಲನೇ ಅಡ್ಡ ರಸ್ತೆ, ಕಂಗ್ರಾಳ್ಕರ್ ಬಿಲ್ಡಿಂಗ್, ಬೆಳಗಾವಿ. | ಹಿಂದುಳಿದ ವರ್ಗ (ಮಹಿಳೆ) |
| 3 | ಶ್ರೀ ಗಜಾನನ ನಂದಗಡಕರ್, ನಂ.3569, ಮಹಾದೇವ್ ಅರ್ಕೇಡ್, ಶನಿವಾರ್ ಕೂಟ್, ಬೆಳಗಾವಿ | ಸಾಮಾನ್ಯ |
| 4 | ಶ್ರೀ ಅಲ್ತಾಫ್ ಸಿಕಂದರ್ ಅತ್ತಾರ್ ನಂ. 88, 2ನೇ ಅಡ್ಡ ರಸ್ತೆ, ಶಿವಾಜಿನಗರ, ಬೆಳಗಾವಿ. | ಅಲ್ಪಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2678

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಚಿಕ್ಕಮಗಳೂರು ಜಿಲ್ಲೆ, ನರಸಿಂಹರಾಜಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/42/ ಹೆಚ್ ಎಎಂ/1999, ದಿನಾಂಕ 10–05–2000.

2) ಸರ್ಕಾರದ ಆದೇಶ ಸಂಖ್ಯೆ ಸಂ.ವ ಇ/18/ ಹೆಚ್ ಎಎಸ್/2008, ದಿನಾಂಕ 16–09–2009.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಚಿಕ್ಕಮಗಳೂರು ಜಿಲ್ಲೆಯ, ನರಸಿಂಹರಾಜಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ 63 ಹೆಚ್ ಎಎಸ್ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಚಿಕ್ಕಮಗಳೂರು ಜಿಲ್ಲೆ, ನರಸಿಂಹರಾಜಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಹೆಚ್. ನಾಗರಾಜ ಪವಾರ್ ಬಿನ್ ಹನುಮಂತಪ್ಪ, ಹೌಸಿಂಗ್ ಬೋರ್ಡ್ ಕಾಲೋನಿ, ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ. | ಹಿಂದುಳಿದ ವರ್ಗ |
| 2 | ಶ್ರೀಮತಿ ಸುಶೀಲ ಕೋಂ ಮಲ್ಲೀಶ್, ಮೇದರ ಬೀದಿ, ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ. | ಪರಿಶಿಷ್ಟ ವರ್ಗ |
| 3 | ಶ್ರೀಮತಿ ಬಿ.ಎನ್.ವಿನೋದ ಕೋಂ ಅಭಿನಂದನ್, ಬಸ್ತಿಮಠ, ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ. | ಅಲ್ಪಸಂಖ್ಯಾತರು |
| 4 | ಶ್ರೀ ಕೆ.ಟಿ.ಚಂದ್ರೇಗೌಡ ಬಿನ್ ತಿಮ್ಮೇಗೌಡ, ಟಿ.ಬಿ.ರಸ್ತೆ, ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ. | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2679

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

**ವಿಷಯ:** ಪಟ್ಟಣ/ನಗರ ಪ್ರದೇಶಗಳಲ್ಲಿನ ಬಡಜನರಿಗೆ ವಸತಿ ಕಲ್ಪಿಸಲು "ನಮ್ಮ ಮನೆ" ಕಾರ್ಯಕ್ರಮವನ್ನು ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:** ಕೇಂದ್ರ ಸರ್ಕಾರದ ಅ.ಸ.ಪತ್ರ ಸಂ. ಐ–14014/1/2006–ಹೌಸಿಂಗ್ (ಭಾ) ದಿನಾಂಕ–31.3.209

**ಪ್ರಸ್ತಾವನೆ:**

ಕೇಂದ್ರ ಸರ್ಕಾರದ ವಸತಿ ಮತ್ತು ನಗರ ಬಡತನ ನಿರ್ಮೂಲನಾ ಇಲಾಖೆಯು ನಗರ ಪ್ರದೇಶಗಳಲ್ಲಿನ ಬಡಜನರಿಗೆ ಬೇರೆಯವರಿಂದ ನಿರ್ಮಿಸಲ್ಪಟ್ಟ ಕಟ್ಟಡವನ್ನು ಖರೀದಿಸಲು ಅಥವಾ ಅವರ ನಿವೇಶನವನ್ನು ಮನೆ ಕಟ್ಟಿಕೊಳ್ಳಲು 1.00 ಲಕ್ಷ ರೂ.ಗಳಿಂದ 1.60 ಲಕ್ಷ ರೂ.ಗಳವರೆಗೆ ಸ್ಥಳೀಯ ಬ್ಯಾಂಕುಗಳಿಂದ ಸಾಲ ನೀಡಲು "ನಗರದ ಬಡಜನರ ವಸತಿಗಾಗಿ ಬಡ್ಡಿ ಸಹಾಯಧನ ಯೋಜನೆ"ಯನ್ನು (Interest Subsidy Scheme for Housing the Urban Poor – ISHUP) ಜಾರಿಗೆ ತಂದಿದೆ. ರಾಜ್ಯದಲ್ಲಿ ಈ ಯೋಜನೆಯನ್ನು ಜಾರಿಗೆ ತರಲು ಈ ಕೆಳಗಿನ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂ. ವಇ 37 ಹೆಚ್‌ಎಹೆಚ್ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

ಕೇಂದ್ರ ಸರ್ಕಾರದ "ನಗರದ ಬಡಜನರ ವಸತಿಗಾಗಿ ಬಡ್ಡಿ ಸಹಾಯ ಧನ ಯೋಜನೆ"ಯ ಲಾಭವನ್ನು ರಾಜ್ಯದ ಪಟ್ಟಣ/ನಗರಗಳಲ್ಲಿನ ನಿವೇಶನ ಹೊಂದಿರುವ ಆರ್ಥಿಕ ಅಶಕ್ತ ಹಾಗೂ ಕಡಿಮೆ ಆದಾಯದ ಗುಂಪಿನ 2 ಲಕ್ಷ ಫಲಾನುಭವಿಗಳಿಗೆ ಲಭ್ಯಗೊಳಿಸಲು "ನಮ್ಮ ಮನೆ" ಕಾರ್ಯಕ್ರಮದಡಿ ಜಾರಿಗೊಳಿಸಲು ಈ ಕೆಳಗಿನಂತೆ ಕ್ರಮ ಕೈಗೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ :

ಅ) ಈ ಯೋಜನೆಯನ್ನು ರಾಜ್ಯದಲ್ಲಿ "ನಮ್ಮ ಮನೆ" ಕಾರ್ಯಕ್ರಮದಡಿ ಪೌರಾಡಳಿತ ನಿರ್ದೇಶನಾಲಯ ಹಾಗೂ ಜಿಲ್ಲಾಧಿಕಾರಿಗಳ ಸಮನ್ವಯದೊಂದಿಗೆ ನಗರ ಸ್ಥಳೀಯ ಸಂಸ್ಥೆಗಳ ಮುಖಾಂತರ ಈ ಯೋಜನೆಯನ್ನು ಜಾರಿಗೆ ತರುವುದು.

ಆ) ಪಟ್ಟಣ/ನಗರ ಸ್ಥಳೀಯ ಸಂಸ್ಥೆಗಳು ಯೋಜನೆಯ ಬಗ್ಗೆ ವ್ಯಾಪಕ ಪ್ರಚಾರ ನೀಡಿ ಅರ್ಹ ಕುಟುಂಬಗಳಿಂದ ಅರ್ಜಿಗಳನ್ನು ಪಡೆದು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿತವಾದ ಆಯ್ಕೆ ಸಮಿತಿಯಿಂದ ಫಲಾನುಭವಿಗಳ ಪಟ್ಟಿ ತಯಾರಿಸುವುದು.

ಇ) ಯೋಜನೆಯ ನಿಬಂಧನೆಗಳ ಮೇರೆಗೆ ಮತ್ತು ವರ್ಗಾವಾರು ಆದ್ಯತೆಗಳೊಂದಿಗೆ ಫಲಾನುಭವಿಗಳ ಪಟ್ಟಿಯನ್ನು ಅಂತಿಮಗೊಳಿಸಿ, ಅರ್ಹ ಫಲಾನುಭವಿಗಳನ್ನು ಬ್ಯಾಂಕಿನ ಸಾಲಕ್ಕೆ ಶಿಫಾರಸ್ಸು ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸ್ಥಳೀಯ ಉಪ ವಿಭಾಗಾಧಿಕಾರಿಗಳು, ತಹಶೀಲ್ದಾರರು, ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿಗಳು ಸದಸ್ಯರಾಗಿರುವ ಹಾಗೂ ನಗರ ಸ್ಥಳೀಯ ಸಂಸ್ಥೆಯ ಆಯುಕ್ತರು ಅಥವಾ ಮುಖ್ಯ ಅಧಿಕಾರಿ ಸಮಾವೇಶಕ ಸದಸ್ಯರಾಗಿರುವ ಆಯ್ಕೆ ಸಮಿತಿ ರಚಿಸುವುದು.

ಈ) ಪೌರಾಡಳಿತ ನಿರ್ದೇಶನಾಲಯವು ಫಲಾನುಭವಿಗಳಿಗೆ ಸಾಲದ ಹೊರೆ ತಗ್ಗಿಸಲು ಕೇಂದ್ರ ಸರ್ಕಾರದ ಸಾಲದ ಸೌಲಭ್ಯದೊಂದಿಗೆ ರಾಜ್ಯ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯಕ್ರಮಗಳಡಿ ಲಭ್ಯವಿರುವ ಮನೆ ನಿರ್ಮಾಣ ಸಹಾಯಧನದ ಸೌಲಭ್ಯವನ್ನೂ ವಿಸ್ತರಿಸಲು ಸಂಬಂಧಪಟ್ಟ ಇಲಾಖೆಗಳೊಂದಿಗೆ ಸಂಪರ್ಕಿಸಿ ಸೂಕ್ತ ಕ್ರಮ ಕೈಗೊಳ್ಳುವುದು.

ಉ) ನಿರ್ಮಿತಿ ಕೇಂದ್ರಗಳ ಮೂಲಕ ಮನೆ ಕಟ್ಟಿಕೊಳ್ಳಬಯಸುವ ಕುಟುಂಬಗಳಿಗೆ ನಿರ್ಮಿತಿ ಕೇಂದ್ರಗಳು ಹಾರು ಬೂದಿ ಇಟ್ಟಿಗೆ, ಪೂರ್ವನಿರ್ಮಿತ ಕಿಟಕಿ/ ಬಾಗಿಲು, ಗ್ರೀನವುಡ್ ಪೀಠೋಪಕರಣ ಮುಂತಾದವುಗಳನ್ನು ಉಪಯೋಗಿಸಿ ಮಿತವ್ಯಯದಲ್ಲಿ ಮನೆಗಳನ್ನು ನಿರ್ಮಿಸಲು ಸಂಪೂರ್ಣ ಸಹ ಕಾರ ನೀಡುವುದು.

ಊ) ಬಡಾವಣೆಗಳಲ್ಲಿ "ನಮ್ಮ ಮನೆ" ಯೋಜನೆಯಡಿ ಗುಂಪು ಮನೆಗಳನ್ನು ನಿರ್ಮಿಸಿಕೊಳ್ಳಲು ನಗರ ಸ್ಥಳೀಯ ಸಂಸ್ಥೆಗಳು ಫಲಾನುಭವಿಗಳನ್ನು ಪ್ರೋತ್ಸಾಹಿಸುವುದು ಮತ್ತು ಹೀಗೆ ನಿರ್ಮಿಸಲ್ಪಡುವ ಗುಂಪು ಮನೆಗಳಿಗೆ ಆಯಾ ನಗರ ಸ್ಥಳೀಯ ಸಂಸ್ಥೆಗಳೆ ರಸ್ತೆ, ಕುಡಿಯುವ ನೀರು, ವಿದ್ಯುಚ್ಛಕ್ತಿ, ಬೀದಿ ದೀಪ, ಒಳಚರಂಡಿ ಮುಂತಾದ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು;

ಋ) ಕರ್ನಾಟಕ ಗೃಹ ಮಂಡಳಿಯು ತಾನು ನಿರ್ಮಿಸಿದ ಬಡಾವಣೆಗಳಲ್ಲಿಯೂ "ನಮ್ಮ ಮನೆ" ಯೋಜನೆಯಡಿ ಆರ್ಥಿಕ ಅಶಕ್ತ ಹಾಗೂ ಕಡಿಮೆ ಆದಾಯದ ಗುಂಪಿನವರಿಗೆ ಮನೆಗಳನ್ನು ನಿರ್ಮಿಸಿಕೊಳ್ಳಲು ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು;

ೠ) ರಾಜ್ಯದ ಎಲ್ಲಾ ನಗರಾಭಿವೃದ್ಧಿ ಪ್ರಾಧಿಕಾರಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಅಶಕ್ತರು/ ಕಡಿಮೆ ಆದಾಯದ ಗುಂಪಿನವರಿಗೆ ಮೀಸಲಾಗಿಟ್ಟ ನಿವೇಶನಗಳಲ್ಲಿ "ನಮ್ಮ ಮನೆ" ಯೋಜನೆಯಡಿ ಸಾಲವನ್ನು ಉಪಯೋಗಿಸಿಕೊಂಡು ಆರ್ಥಿಕವಾಗಿ ಅಶಕ್ತರು/ಕಡಿಮೆ ಆದಾಯದ ಗುಂಪಿನವರಿಗೆ ಮನೆಗಳನ್ನು ನಿರ್ಮಿಸಿಕೊಡಲು ನಗರಾಭಿವೃದ್ಧಿ ಇಲಾಖೆಯಿಂದ ಸೂಚನೆಗಳನ್ನು ಹೊರಡಿಸುವುದು.

ಎ) ರಾಜ್ಯಮಟ್ಟದಲ್ಲಿ ಯೋಜನೆಯ ಉಸ್ತುವಾರಿಗಾಗಿ ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ವಸತಿ ಇಲಾಖೆಯ ಕಾರ್ಯದರ್ಶಿ, ರಾಜ್ಯಮಟ್ಟದ ಬ್ಯಾಂಕರುಗಳ ಸಮಿತಿಯ ಸಮನ್ವಯ ಅಧಿಕಾರಿ, ಸಂಬಂಧಪಟ್ಟ ಲೀಡ್ ಬ್ಯಾಂಕುಗಳ ಪ್ರತಿನಿಧಿಗಳು, ನ್ಯಾಶನಲ್ ಹೌಸಿಂಗ್ ಬ್ಯಾಂಕಿನ ಪ್ರಾದೇಶಿಕ, ಪ್ರತಿನಿಧಿ ಹುಡ್ಕೊ ಸಂಸ್ಥೆಯ ಪ್ರಾದೇಶಿಕ ಪ್ರತಿನಿಧಿ, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು ಸದಸ್ಯರಾಗಿರುವ ಹಾಗೂ ಪೌರಾಡಳಿತ ನಿರ್ದೇಶಕರು ಸಮಾವೇಶಕ ಸದಸ್ಯರಾಗಿರುವ ಸಮಿತಿಯು ರಚನೆಗೊಂಡು ನಿಯತಕಾಲಿಕವಾಗಿ ಯೋಜನೆಯ ಪ್ರಗತಿ ಪರಿಶೀಲನೆ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2684

**ಜಿ.ವಿ. ಕೊಂಗವಾಡ**

ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ.

**ಸುತ್ತೋಲೆ**

**ಸಂ. ವಇ 37 ಹೆಚ್‌ಎಹೆಚ್ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

**ವಿಷಯ:** ಪಟ್ಟಣ/ನಗರ ಪ್ರದೇಶಗಳಲ್ಲಿನ ಬಡಜನರಿಗೆ ವಸತಿ ಕಲ್ಪಿಸಲು "ನಮ್ಮ ಮನೆ" ಯೋಜನೆಯ ಅನುಷ್ಠಾನದ ಮಾರ್ಗಸೂಚಿಗಳು.

**ಉಲ್ಲೇಖ:** 1. ಕೇಂದ್ರ ಸರ್ಕಾರದ ಅ.ಸ.ಪತ್ರ ಸಂ. ಐ–14014/1/2006–ಹೌಸಿಂಗ್ (ಭಾ) ದಿನಾಂಕ–31.3.209

2. ಸರ್ಕಾರದ ಆದೇಶ ಸಂ. ವಇ37 ಹೆಚ್‌ಎಹೆಚ್ 2009 ದಿನಾಂಕ 17–11–2009

ಕೇಂದ್ರ ಸರ್ಕಾರದ ವಸತಿ ಮತ್ತು ನಗರ ಬಡತನ ನಿರ್ಮೂಲನಾ ಇಲಾಖೆಯು ನಗರ ಪ್ರದೇಶಗಳಲ್ಲಿನ ಬಡಜನರಿಗೆ ಬೇರೆಯವರಿಂದ ನಿರ್ಮಿಸಲ್ಪಟ್ಟ ಮನೆಯನ್ನು ಖರೀದಿಸಲು ಅಥವಾ ಅವರ ನಿವೇಶನದಲ್ಲಿ ಮನೆ ಕಟ್ಟಿಕೊಳ್ಳಲು 1.00 ಲಕ್ಷ ರೂ.ಗಳಿಂದ 1.60 ಲಕ್ಷ ರೂ.ಗಳವರೆಗೆ ಸಾಲ ನೀಡಲು "ನಗರದ ಬಡಜನರ ಸವತಿಗಾಗಿ ಬಡ್ಡಿ ಸಹಾಯಧನ ಯೋಜನೆ"ಯನ್ನು (Interest Subsidy Scheme for Housing the urban Poor-ISHUP) ಜಾರಿಗೆ ತಂದಿದೆ. ಜಿಲ್ಲಾಧಿಕಾರಿಗಳು ಹಾಗೂ ಪೌರಾಡಳಿತ ನಿರ್ದೇಶಕರ ಮುಖಾಂತರ ನಗರ ಸ್ಥಳೀಯ ಸಂಸ್ಥೆಗಳ ಸಹಯೋಗದೊಂದಿಗೆ ಈ ಯೋಜನೆಯನ್ನು ರಾಜ್ಯದಲ್ಲಿ "ನಮ್ಮ ಮನೆ" ಕಾರ್ಯಕ್ರಮದಡಿಯಲ್ಲಿ ಜಾರಿಗೆ ತರಲು ಈ ಕೆಳಗಿನ ಮಾರ್ಗಸೂಚಿಗಳನ್ನು ಹೊರಡಿಸಿದೆ.

**(ಅ) ಫಲಾನುಭವಿಯ ಅರ್ಹತೆ :**

1) ಈ ಯೋಜನೆಯಡಿ ಗರಿಷ್ಠ 3,300 ರೂ.ಗಳ ಮಾಸಿಕ ಆದಾಯ ಹೊಂದಿರುವ ಕುಟುಂಬಗಳನ್ನು ಆರ್ಥಿಕವಾಗಿ ಅಶಕ್ತರೆಂದೂ ಹಾಗೂ 3,301 ರೂ.ಗಳಿಂದ 7,300 ರೂ.ಗಳ ಒಳಗಿನ ಮಾಸಿಕ ಆದಾಯ ಹೊಂದಿರುವ ಕುಟುಂಬಗಳನ್ನು ಕಡಿಮೆ ಆದಾಯದ ಗುಂಪು ಎಂದು ಗೊತ್ತುಪಡಿಸಲಾಗಿದೆ.

2) ಆರ್ಥಿಕವಾಗಿ ಅಶಕ್ತರು ಹಾಗೂ ಕಡಿಮೆ ಆದಾಯ ಗುಂಪಿನ ಜನರಿಗೆ ಮನೆ ಖರೀದಿಸಲು ಅಥವಾ ಮನೆ ಕಟ್ಟಿಕೊಳ್ಳಲು ಕೇಂದ್ರ ಸರ್ಕಾರದ ಬಡ್ಡಿ ಸಹಾಯಧನದೊಂದಿಗೆ ಮನೆ ಸಾಲ ನೀಡಲಾಗುತ್ತದೆ. ಆದರೆ, ಫಲಾನುಭವಿಯು ತನ್ನ ಹೆಸರಿನಲ್ಲಾಗಲಿ, ತನ್ನ ಪತಿ/ಪತ್ನಿಯ ಹೆಸರಿನಲ್ಲಾಗಲಿ ಅಥವಾ ಅವಲಂಬಿತ ಮಗುವಿನ ಹೆಸರಿನಲ್ಲಾಗಲಿ ಸ್ವಂತ ಮನೆಯನ್ನು ಹೊಂದಿರಬಾರದು. ಇಂಥ ಫಲಾನುಭವಿಯು ಪಟ್ಟಣ/ನಗರ ಪ್ರದೇಶದಲ್ಲಿ ನಿವೇಶನ ಹೊಂದಿರಬೇಕು ಆದರೆ ತನ್ನ ಹೆಸರಿನಲ್ಲಾಗಲಿ, ತನ್ನ ಪತಿ/ಪತ್ನಿಯ ಹೆಸರಿನಲ್ಲಾಗಲಿ ಅಥವಾ ಅವಲಂಬಿತ ಮಗುವಿನ ಹೆಸರಿನಲ್ಲಾಗಲಿ ಯಾವುದೇ ಪಕ್ಕಾ ಮನೆಯನ್ನು ಹೊಂದಿರಬಾರದು.

3) ಅರ್ಜಿದಾರರು ಸ್ಥಳೀಯ ಪಟ್ಟಣ/ನಗರದ ಖಾಯಂ ವಾಸಿಯಾಗಿರಬೇಕು.

**ಆ) ಯೋಜನೆಯ ಸೌಲಭ್ಯ:**

ಈ ಯೋಜನೆಯಡಿ ಆರ್ಥಿಕವಾಗಿ ಅಶಕ್ತ ವ್ಯಕ್ತಿಗೆ ಕನಿಷ್ಠ 25 ಚದರ ಮೀಟರ್‌ಗಳ (269 ಚದರ ಅಡಿಗಳ) ಮನೆ ನಿರ್ಮಾಣಕ್ಕಾಗಿ 15 ರಿಂದ 20 ವರ್ಷಗಳ ಅವಧಿಗೆ ಗರಿಷ್ಠ 1.00 ಲಕ್ಷ ರೂ.ಗಳ ಮೊತ್ತದ ಸಹಾಯಧನದೊಂದಿಗಿನ ಸಾಲವು ಲಭ್ಯವಿರುತ್ತದೆ. ಹೆಚ್ಚಿನ ಮೊತ್ತದ ಸಾಲ ಬೇಕಾಗಿದ್ದಲ್ಲಿ. ಆ ಹೆಚ್ಚಿನ ಮೊತ್ತಕ್ಕೆ ಬಡ್ಡಿ ಸಹಾಯಧನ ಸೌಲಭ್ಯವಿರುವುದಿಲ್ಲ ಇದೇ ರೀತಿ, ಕಡಿಮೆ ಆದಾಯದ ಗುಂಪಿನ ವ್ಯಕ್ತಿಗೆ ಕನಿಷ್ಠ 40 ಚದರ ಮೀಟರ್‌ಗಳ (ಸುಮಾರು 430 ಚದರ ಅಡಿಗಳ) ಮನೆ ನಿರ್ಮಾಣಕ್ಕಾಗಿ ಗರಿಷ್ಠ 1.60 ಲಕ್ಷ ರೂ.ಗಳ ಮೊತ್ತದ ಸಹಾಯಧನದೊಂದಿಗಿನ ಸಾಲವು ಲಭ್ಯವಿರುತ್ತದೆ.

**ಇ) ಆಯ್ಕೆ ಪ್ರಕ್ರಿಯೆ :**

1) ನಮ್ಮ ಮನೆ ಯೋಜನೆಯ ವಿವರಗಳನ್ನು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ತಮ್ಮ ವ್ಯಾಪ್ತಿಯ ಪ್ರದೇಶದಲ್ಲಿ ಪ್ರಮುಖ ಸಾರ್ವಜನಿಕ ಸ್ಥಳಗಳಲ್ಲಿ ಜಾಹೀರಾತು ಫಲಕಗಳನ್ನು ಹಾಕಿಸಿ, ಮುದ್ರಣ ಮಾಧ್ಯಮ ಮತ್ತು ಸ್ಥಳೀಯ ಕೇಬಲ್ ಟಿ.ವಿ.ಗಳ ಮುಖಾಂತರ ವ್ಯಾಪಕ ಪ್ರಚಾರ ನೀಡಬೇಕು. ರಾಜ್ಯಮಟ್ಟದಲ್ಲಿ ಪೌರಾಡಳಿತ ನಿರ್ದೇಶನಾಲಯವು ದೂರದರ್ಶನದಲ್ಲಿ ಜನಪ್ರಿಯ ಚಾನೆಲ್‌ಗಳ ಮೂಲಕ ಪ್ರಚಾರ ನೀಡಲು ಕ್ರಮ ಕೈಗೊಳ್ಳಬೇಕು. ಆಯವ್ಯಯದಲ್ಲಿ ಪ್ರಚಾರ ಕಾರ್ಯಕ್ರಮಗಳಿಗಾಗಿ ಸೂಕ್ತ ಅನುದಾನವನ್ನು ಹೊಂದಿಸಬೇಕು.

2) ಈಗಾಗಲೇ ಸಿದ್ಧವಾಗಿರುವ ಮನೆಯನ್ನು ಖರೀದಿಸಬಯಸುವ ಅಥವಾ ತನ್ನ ನಿವೇಶನದಲ್ಲಿ ಹೊಸದಾಗಿ ಮನೆಯನ್ನು ಕಟ್ಟಿಕೊಳ್ಳಬಯಸುವ ಆರ್ಥಿಕವಾಗಿ ಅಶಕ್ತ ಹಾಗೂ ಕಡಿಮೆ ಆದಾಯದ ಗುಂಪಿನವರಿಂದ ಆಯಾ ನಗರ ಸ್ಥಳೀಯ ಸಂಸ್ಥೆಗಳ ಆಯುಕ್ತರು ಅಥವಾ ಮುಖ್ಯ ಅಧಿಕಾರಿಗಳು ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿ, ಪೌರಾಡಳಿತ ನಿರ್ದೇಶನಾಲಯವು ಸೂಚಿಸಿದ ವೇಳಾಪಟ್ಟಿಯಂತೆ ಮುಂದಿನ ಕ್ರಮ ಕೈಗೊಳ್ಳಬೇಕು.

3) ಅರ್ಜಿ ನಮೂನೆಗಳು ಎರಡು ಪುಟಕ್ಕೆ ಮಿಕ್ಕದಂತಿದ್ದು, ಅರ್ಜಿದಾರರ ಕುಟುಂಬ ಸ್ವಂತ ಮನೆ ಅಥವಾ ಪಕ್ಕಾ ಮನೆ ಹೊಂದದಿರುವ ಬಗ್ಗೆ, ಕುಟುಂಬದ ಮಾಸಿಕ ವರಮಾನ, ಅದೇ ಸ್ಥಳದ ಖಾಯಂ ವಾಸಿಯಾಗಿರುವ ಬಗ್ಗೆ, ಪರಿಶಿಷ್ಟ ಜಾತಿ/ಪಂಗಡ ಅಲ್ಪಸಂಖ್ಯಾತ ಅಥವಾ ವಿಕಲಚೇತನರಾಗಿರುವ ಬಗ್ಗೆ ಮುಂತಾದ ದೃಢೀಕರಣದ

ವಿವರಗಳನ್ನು ಹೊಂದಿರತಕ್ಕದ್ದು. ಪೌರಾಡಳಿತ ನಿರ್ದೇಶನಾಲಯವು ಅರ್ಜಿ ನಮೂನೆಯನ್ನು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ಪೂರೈಸುವುದು.

4) ಅರ್ಜಿ ಪತ್ರಗಳನ್ನು ಆಯಾ ನಗರ ಸ್ಥಳೀಯ ಸಂಸ್ಥೆಗಳು ಮುದ್ರಿಸಿ ಅರ್ಜಿದಾರರಿಗೆ ಉಚಿತವಾಗಿ ವಿತರಿಸತಕ್ಕದ್ದು, ಅರ್ಜಿಗಳ ಮುದ್ರಣದ ವೆಚ್ಚವನ್ನು ನಗರ ಸ್ಥಳೀಯ ಸಂಸ್ಥೆಗಳೇ ಭರಿಸತಕ್ಕದ್ದು. ಬಂದ ಅರ್ಜಿಗಳನ್ನು ನಿರ್ದಿಷ್ಟವಾದ ರಜಿಸ್ಟರ್‌ನಲ್ಲಿ ದಾಖಲಿಸಿ, ಅರ್ಜಿ ಪಡೆದುದಕ್ಕಾಗಿ ಅರ್ಜಿದಾರರಿಗೆ ಸ್ವೀಕೃತಿ ನೀಡಬೇಕು.

5) ನಗರ ಸ್ಥಳೀಯ ಸಂಸ್ಥೆಗಳು ಆರ್ಥಿಕವಾಗಿ ಹಾಗೂ ಕಡಿಮೆ ಆದಾಯ ಗುಂಪಿನವರಿಂದ ಅರ್ಜಿಗಳನ್ನು ಆಹ್ವಾನಿಸಿ, ಅರ್ಜಿಗಳನ್ನು ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಆಯ್ಕೆ ಸಮಿತಿಗಳ ಮೂಲಕ ಪರಿಶೀಲಿಸಿ ಫಲಾನುಭವಿಗಳ ಆಯ್ಕೆಯನ್ನು ಅಂತಿಮಗೊಳಿಸಿ ಸಂಬಂಧಪಟ್ಟ ಬ್ಯಾಂಕ್‌ಗಳಿಗೆ ಸಾಲ ವಿತರಿಸಲು ಅರ್ಜಿಗಳನ್ನು ಶಿಫಾರಸ್ಸು ಮಾಡಬೇಕು.

6) ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿನ ಆಯ್ಕೆ ಸಮಿತಿಯಲ್ಲಿ ಆಯಾ ಪ್ರದೇಶದ ಉಪ ವಿಭಾಗಾಧಿಕಾರಿಗಳು ತಹಶೀಲದಾರರು, ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿ ಸದಸ್ಯರಾಗಿದ್ದು, ಸ್ಥಳೀಯ ಸಂಸ್ಥೆಯ ಆಯುಕ್ತರು ಅಥವಾ ಮುಖ್ಯ ಅಧಿಕಾರಿ ಸಮಿತಿಯ ಸಮಾವೇಶಕ ಸದಸ್ಯರಾಗಿರತಕ್ಕದ್ದು.

7) ಅರ್ಜಿದಾರರ ಬ್ಯಾಂಕಿನ ಸಾಲದ ಕಾರ್ಯವಿಧಾನ ಮತ್ತು ಕಾಗದಪತ್ರಗಳ ನಿರ್ವಹಣೆಗೆ ನಗರ ಸ್ಥಳೀಯ ಸಂಸ್ಥೆಗಳ ಸಿಬ್ಬಂದಿ ನೆರವನ್ನು ನೀಡುತ್ತವೆ.

8) ರಾಜ್ಯಾದ್ಯಂತ ನಗರ ಸ್ಥಳೀಯ ಸಂಸ್ಥೆಗಲ ಫಲಾನುಭವಿಗಳ ಅಂತಿಮ ಪಟ್ಟಿ ಆಯ್ಕೆ ಪರಿಶೀಲನೆ ಮತ್ತು ಸಮನ್ವಯಗಳಿಗಾಗಿ ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ, ಪೌರಾಡಳಿತ ಇಲಾಖೆಯ ನಿರ್ದೇಶಕರು ಸಂಬಂಧಪಟ್ಟ ಲೀಡ್ ಬ್ಯಾಂಕ್‌ಗಳ ಪ್ರತಿನಿಧಿಗಳು ನ್ಯಾಷನಲ್ ಹೌಸಿಂಗ್ ಬ್ಯಾಂಕ್‌ನ ಪ್ರಾದೇಶಿಕ ಪ್ರತಿನಿಧಿ, ಹುಡ್ಕೋ ಸಂಸ್ಥೆಯ ಪ್ರಾದೇಶಿಕ ಪ್ರತಿನಿಧಿಗಳು ಸದಸ್ಯರಾಗಿರುವ ಹಾಗೂ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ವ್ಯವಸ್ಥಾಪಕ ನಿರ್ದೇಶಕರು, ಸದಸ್ಯ ಸಮಾವೇಶಕರಾಗಿರುವ ಉಸ್ತುವಾರಿ ಸಮಿತಿಯನ್ನು ರಚಿಸಿ ಕಾರ್ಯಕ್ರಮದ ಪರಿಶೀಲನೆಗಾಗಿ ಕ್ರಮ ಕೈಗೊಳ್ಳತಕ್ಕದ್ದು.

9) ಪೌರಾಡಳಿತ ನಿರ್ದೇಶನಾಲಯವು ನಗರ ಸ್ಥಳೀಯ ಸಂಸ್ಥೆಗಳು ಪ್ರಚಾರ ನೀಡಬೇಕಾಗಿರುವ ಯೋಜನೆಯ ಸಾಹಿತ್ಯವನ್ನು ಮತ್ತು ಅರ್ಜಿಗಳ ನಮೂನೆಯನ್ನು ಏಕರೂಪವಾಗಿ ತಯಾರಿಸಿ ನಗರ ಸ್ಥಳೀಯ ಸಂಸ್ಥೆಗಳಿಗೆ ಲಭ್ಯಗೊಳಿಸಬೇಕು.

10) ಆಯ್ಕೆ ಸಮಿತಿಯು ಅಂತಿಮಗೊಳಿಸುವ ಅರ್ಜಿದಾರರ ಪಟ್ಟಿಯು ಯಾವ ಯಾವ ವಿವರಗಳನ್ನು ಹೊಂದಿರಬೇಕೆಂಬುದನ್ನು ಪೌರಾಡಳಿತ ನಿರ್ದೇಶನಾಲಯವೇ ನಿರ್ಧರಿಸಿ ಪ್ರಪತ್ರವನ್ನು ತಯಾರಿಸಬೇಕು.

11) ಯೋಜನೆಯ 2012ಕ್ಕೆ ಮುಕ್ತಾಯಗೊಳ್ಳಲಿದ್ದು, ಅದ್ಕಕನುಗುಣವಾಗಿ ತಯಾರಿಸಬೇಕು. ಪೌರಾಡಳಿತ ನಿರ್ದೇಶನಾಲಯವು ಪ್ರತಿ ವರ್ಷ ಅರ್ಜಿಗಳನ್ನು ಸಂಗ್ರಹಿಸಲು ಕೊನೆಯ ದಿನಾಂಕ, ಅರ್ಜಿದಾರರ ಪಟ್ಟಿಯನ್ನು ಅಂತಿಮಗೊಳಿಸುವ ದಿನಾಂಕ, ಪಟ್ಟಿಯನ್ನು ಬ್ಯಾಂಕುಗಳಿಗೆ ಸಲ್ಲಿಸುವ ದಿನಾಂಕ ಮುಂತಾದ ಚಟುವಟಿಕೆಗಳ ವೇಳಾಪಟ್ಟಿಯನ್ನು ನಿಷ್ಕರ್ಷೆ ಮಾಡಿ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಅದರಂತೆ ಏಕರೂಪವಾಗಿ ಕಾರ್ಯೋನ್ಮುಖರಾಗಲು ಮುಂಚಿತವಾಗಿ ಸೂಚನೆ ನೀಡಬೇಕು. ನಿರ್ದೇಶನಾಲಯವು ಪ್ರಾರಂಭಿಕ ವರ್ಷದಲ್ಲಿ ಅರ್ಜಿಗಳನ್ನು ಸ್ವೀಕರಿಸಲು ಎರಡು ತಿಂಗಳುಗಳ ಕಾಲಾವಕಾಶ ನೀಡಿ ಕೊನೆಯ ದಿನಾಂಕವನ್ನಾಗಿ ನಿಗದಿಪಡಿಸಿ, ಅವಶ್ಯಕತೆಗಳಿಗನುಗುಣವಾಗಿ ಮುಂದಿನ ಚಟುವಟಿಕೆಗಳ ವೇಳಾಪಟ್ಟಿಯನ್ನು ನಿಗದಿಪಡಿಸುವುದು.

12) ಪೌರಾಡಳಿತ ನಿದೇಶನಾಲಯವು ಫಲಾನುಭವಿಗಳ ಆಯ್ಕೆ ಪಟ್ಟಿಯನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರು, ವಿಕಲಚೇತನರು ಮತ್ತು ಮಹಿಳಾ ಫಲಾನುಭವಿಗಳಿಗೆ ಆಯಾ ನಗರ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿನ ಜನಸಂಖ್ಯೆಯಲ್ಲಿ ಅವರ ಅನುಪಾತದ ಮೇರೆಗೆ ಆದ್ಯತೆಯನ್ನು ಮೀಸಲಾಗಿರಿಸಲು ಒಂದು ಸೂತ್ರವನ್ನು ನಿರೂಪಿಸಿ ಅದನ್ನು ಪಾಲಿಸುವಂತೆ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ತಿಳಿಸುವುದು.

13) ನಗರ ಸ್ಥಳೀಯ ಸಂಸ್ಥೆಗಳ ಅಧಿಕಾರಿಗಳು ನಿಗದಿತ ದಿನಾಂಕದವರೆಗೆ ಸ್ವೀಕರಿಸಿರುವ ಎಲ್ಲಾ ಅರ್ಜಿಗಳನ್ನು ಕ್ರೋಢಿಕರಿಸಿ, ಅರ್ಜಿಗಳು ಅವಶ್ಯವಿರುವ ಎಲ್ಲಾ ಮಾಹಿತಿಯನ್ನು ಒಳಗೊಂಡಿರುವುದನ್ನು ಮತ್ತು ಅರ್ಜಿದಾರರು ಖರೀದಿಸಬಯಸುವ ಮನೆ ಅಥವಾ ನಿವೇಶನಗಳ ದಾಖಲಾತಿಗಳು ನಿಯಮಾವಳಿಗಳ ಮೇರೆಗೆ ಇರುವುದನ್ನು ಖಚಿತಪಡಿಸಿಕೊಂಡು, ಅರ್ಜಿದಾರರ ಪಟ್ಟಿಯನ್ನು ಎಲ್ಲಾ ವಿವರಗಳೊಂದಿಗೆ ವೇಳಾಪಟ್ಟಿಯಂತೆ ಸಿದ್ಧಪಡಿಸಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು.

14) ಅರ್ಜಿದಾರರಿಗೆ ಆಯಾ ನಗರ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯಲ್ಲಿನ ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರು ವಿಕಲಚೇತನರು ಮತ್ತು ಮಹಿಳಾ ಫಲಾನುಭವಿಗಳಿಗೆ ಅವರ ಅನುಪಾತದ ಮೇರೆಗೆ

ಆದ್ಯತೆ ನೀಡತಕ್ಕದ್ದು. ಆಯ್ಕೆಯಾದ ಅರ್ಜಿದಾರರ ಅಂತಿಮ ಪಟ್ಟಿ ಪೌರಾಡಳಿತ ನಿರ್ದೇಶನಾಲಯದ ಸೂಚನೆಗಳ ಮೇರೆಗೆ ಇರತಕ್ಕದ್ದು.

15) ಆಯ್ಕೆಯಾದ ಆರ್ಥಿಕವಾಗಿ ಅಶಕ್ತ ಹಾಗೂ ಕಡಿಮೆ ಆದಾಯದ ಗುಂಪಿನ ಫಲಾನುಭವಿಗಳು ಸಾಧ್ಯವಾದಷ್ಟು ಮಟ್ಟಿಗೆ ಕ್ರಮವಾಗಿ 70.30ರ ಅನುಪಾತದಲ್ಲಿರುವಂತೆ ನೋಡಿಕೊಳ್ಳತಕ್ಕದ್ದು..

16) ಅರ್ಜಿದಾರರ ಪಟ್ಟಿ ಸಿದ್ಧವಾದ ನಂತರ ನಿಗದಿತ ಅವಧಿಯೊಳಗಾಗಿ ಆಯ್ಕೆ ಸಮಿತಿಗಳು ಅರ್ಹ ಅರ್ಜಿದಾರರ ಪಟ್ಟಿಯನ್ನು ಅಂತಿಮಗೊಳಿಸಿ, ಅರ್ಹ ಅರ್ಜಿದಾರರ ಪಟ್ಟಿಯನ್ನು ಪೂರ್ವಭಾವಿಯಾಗಿ ನಿಗದಿಯಾದ ಸ್ಥಳೀಯ ಬ್ಯಾಂಕಿಗೆ ಹಾಗೂ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಸಲ್ಲಿಸತಕ್ಕದ್ದು.

17) ಈ ಯೋಜನೆಯಡಿಯಲ್ಲಿ ಬಡಾವಣೆಗಳಲ್ಲಿ ನಿರ್ಮಿಸಲ್ಪಡುವ ಗುಂಪು ಮನೆಗಳಿಗೆ ಆಯಾ ನಗರ ಸ್ಥಳೀಯ ಸಂಸ್ಥೆಗಳೇ ರಸ್ತೆ, ಕುಡಿಯುವ ನೀರು ವಿದ್ಯುಚ್ಛಕ್ತಿ, ಬೀದಿ ದೀಪ ಒಳಚರಂಡಿ ಮುಂತಾದ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.

**ಈ) ಮನೆ ಖರೀದಿ ಅಥವಾ ಮನೆ ನಿರ್ಮಾಣ.**

1) ಆಯಾ ಪ್ರದೇಶಗಳಲ್ಲಿನ ನಿರ್ಮಾಣ ಸಾಮಗ್ರಿಗಳ ಬೆಲೆ ಮತ್ತು ಅಲ್ಲಿನ ಕೂಲಿ ದರಗಳನ್ನವಲಂಬಿಸಿ ಆರ್ಥಿಕವಾಗಿ ಅಶಕ್ತ ಫಲಾನುಭವಿಗಳಿಗೆ ಶೌಚಾಲಯ ಸಹಿತ 25 ಚದರ ಮೀಟರ್ ಮನೆಗಳ ನಿರ್ಮಾಣದ ಅಂದಾಜು, ಉದಾಹರಣೆಗೆ ಹೇಳುವುದಾದರೆ, 1.00 ಲಕ್ಷ ರೂ.ಗಳಿಂದ 1.40ಲಕ್ಷ ರೂ.ಗಳು ಆಗಬಹುದಾಗಿದೆ. ಮನೆ ಖರೀದಿಗಾಗಿಯೂ ಇದೇ ರೀತಿ ಕೇಂದ್ರ ಸರ್ಕಾರದ "ನಗರದ ಬಡಜನರ ವಸತಿಗಾಗಿ ಬಡ್ಡಿ ಸಹಾಯಧನ ಯೋಜನೆ"ಯಡಿ 1.00 ಲಕ್ಷ ರೂ.ಗಳ ಸಾಲ ಪಡೆದು, ಅವಶ್ಯವಿದ್ದಲ್ಲಿ ಉಳಿದ ಮೊತ್ತವನ್ನು ಫಲಾನುಭವಿಯ ವಂತಿಗೆಯಿಂದ ಭರಿಸಬಹುದಾಗಿದೆ.

2) ಕಡಿಮೆ ಆದಾಯ ಗುಂಪಿನ ಫಲಾನುಭವಿಗಳು ಕನಿಷ್ಟ 40 ಚದರ ಮೀಟರ್‌ಗಳ ಮನೆ ನಿರ್ಮಾಣಕ್ಕಾಗಿ ಅಥವಾ ಮನೆ ಖರೀದಿಗಾಗಿ ಬಡ್ಡಿ ಸಹಾಯಧನ ಯೋಜನೆಯಡಿ ಸಾಲ ಪಡೆದು, ಅವಶ್ಯವಿರುವ ಉಳಿದ ಮೊತ್ತವನ್ನು ವಂತಿಕೆ ಮೂಲಕ ಭರಿಸಬಹುದಾಗಿದೆ.

ಉದಾಹರಣೆಗೆ ಹೇಳುವುದಾದರೆ, ಬ್ಯಾಂಕು ಫಲಾನುಭವಿಗೆ ಶೇಕಡ 8ರ ಬಡ್ಡಿದರದಲ್ಲಿ ಸಾಲ ನೀಡಿದರೆ, ಕೇಂದ್ರ ಸರ್ಕಾರದ ಶೇಕಡ 5ರ ಬಡ್ಡಿದರದ ಸಹಾಯಧನದೊಂದಿಗೆ, ಫಲಾನುಭವಿಯ ಕೇವಲ ಶೇಕಡ 3ರ ಬಡ್ಡಿದರದಲ್ಲಿ ಈ ಕೆಳಗಿನಂತೆ ಮರುಪಾವತಿ ಮಾಡಬೇಕಾಗುತ್ತದೆ.

| | **ಸಾಲದ ಮೊತ್ತ** | **ಸಾಲದ ಅವಧಿ** | **ಬಡ್ಡಿದರ** | **ಮಾಸಿಕ ಕಂತಿನ ಮೊತ್ತ** |
|---|---|---|---|---|
| 1 | 100000 ರೂ. | 180 ತಿಂಗಳು | 3% | 680 ರೂ.ಗಳು |
| 2 | 120000 ರೂ. | 180 ತಿಂಗಳು | 3% 100000ಕ್ಕೆ ಮತ್ತು 8% 20000ಕ್ಕೆ | 680+191=871 ರೂ.ಗಳು |
| 3 | 150000 ರೂ. | 180 ತಿಂಗಳು | 3% 100000ಕ್ಕೆ ಮತ್ತು 8% 50000ಕ್ಕೆ | 680+478=1158 ರೂ.ಗಳು |
| 4 | 100000 ರೂ. | 240 ತಿಂಗಳು | 3% | 542 ರೂ.ಗಳು |
| 5 | 120000 ರೂ. | 240 ತಿಂಗಳು | 3% 100000ಕ್ಕೆ ಮತ್ತು 8% 20000ಕ್ಕೆ | 542+167=709 ರೂ.ಗಳು |
| 6 | 150000 ರೂ. | 240 ತಿಂಗಳು | 3% 100000ಕ್ಕೆ ಮತ್ತು 8% 50000ಕ್ಕೆ | 542+418=960 ರೂ.ಗಳು |

3) ಮನೆ ನಿರ್ಮಾಣಕ್ಕೆ ಸಾಲ ಮಂಜೂರಾದ ಫಲಾನುಭವಿಗಳು ತಮ್ಮ ನಿವೇಶನದಲ್ಲಿ ನಿರ್ಮಿತಿ ಕೇಂದ್ರಗಳ ತಾಂತ್ರಿಕ ಸಹಾಯದೊಂದಿಗೆ ತಾವೇ ಮನೆಗಳನ್ನು ಕಟ್ಟಿಕೊಳ್ಳಬಹುದಾಗಿದೆ.

4) ನಿರ್ಮಿತಿ ಕೇಂದ್ರಗಳು ಸ್ಥಳೀಯ ನಿರ್ಮಾಣ ಸಾಮಗ್ರಿಗಳ ಬೆಲೆ ಮತ್ತು ಅಲ್ಲಿನ ಕೂಲಿ ದರಗಳನ್ನವಲಂಬಿಸಿ ಕನಿಷ್ಟ 25 ರಿಂದ ಗರಿಷ್ಠ 40 ಚದರ ಮೀಟರುಗಳ ವಿಸ್ತೀರ್ಣದ ಮನೆಗಳ ವಿವಿಧ ನಕ್ಷೆಗಳನ್ನು ಅಂದಾಜು ವೆಚ್ಚದೊಂದಿಗೆ ತಯಾರಿಸಿ ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಸಿದ್ಧಪಡಿಸಿಟ್ಟುಕೊಂಡು ನಗರ ಸ್ಥಳೀಯ ಸಂಸ್ಥೆಗಳ ಕಛೇರಿಗಳಲ್ಲಿ ಸಾರ್ವಜನಿಕರ ಪ್ರದರ್ಶನಕ್ಕೆ ಲಭ್ಯಗೊಳಿಸತಕ್ಕದ್ದು. ಹಾರು ಬೂದಿ ಇಟ್ಟಿಗೆ, ಪೂರ್ವನಿರ್ಮಿತ ಬಾಗಿಲು–ಕಿಟಕಿ, ಗ್ರೀನ್‌ವುಡ್ ಪೀಠೋಪಕರಣಗಳ ಬಳಕೆಗಳ ನಿರೂಪಣೆಗಳನ್ನು ನೀಡತ್ತಕಕದ್ದು.

5) ಒಂದು ವೇಳೆ ಫಲಾನುಭವಿಗಳು ತಾವೇ ಮನೆ ಕಟ್ಟಿಕೊಳ್ಳಲಾಗದಿದ್ದಲ್ಲಿ, ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮವನ್ನು ಸಂಪರ್ಕಿಸಿ ನಿರ್ಮಿತಿ ಕೇಂದ್ರಗಳು, ಕರ್ನಾಟಕ ಗ್ರಾಮೀಣ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ನಿಗಮ ಅಥವಾ ಇನ್ನಾವುದೇ ಸರ್ಕಾರಿ ಸಂಸ್ಥೆಗಳ ಮುಖಾಂತರ ಮನೆಗಳನ್ನು ನಿರ್ಮಿಸಿಕೊಳ್ಳಬಹುದಾಗಿದೆ.

**ಉ) ಇತರ ಸೌಲಭ್ಯಗಳು**

ರಾಜ್ಯ ಸರ್ಕಾರದ ಮತ್ತು ಕೇಂದ್ರ ಸರ್ಕಾರದ ವಿವಿಧ ಯೋಜನೆಗಳಡಿಯಲ್ಲಿ ಮನೆಗಳ ನಿರ್ಮಾಣಕ್ಕೆ ಸಹಾಯಧನ ಲಭ್ಯವಿದ್ದು, ಫಲಾನುಭವಿಗಳು ಈ ಲಾಭಗಳನ್ನೂ ಪಡೆಯಬಹುದಾಗಿದೆ. ಪೌರಾಡಳಿತ ನಿರ್ದೇಶನಾಲಯವು ವಿವಿಧ ಇಲಾಖೆಗಳಿಂದ ಲಭ್ಯವಿರುವ ಸಹಾಯಧನವನ್ನು ಫಲಾನುಭವಿಗಳಿಗೆ ದೊರಕಿಸಲು ಕ್ರಮ ಕೈಗೊಳ್ಳುವುದು. ನಗರ ಸ್ಥಳೀಯ ಸಂಸ್ಥೆಗಳ ಇಂತಹ ಯೋಜನೆಗಳ ಬಗ್ಗೆಯೂ ವ್ಯಾಪಕ ಪ್ರಚಾರ ನೀಡುತ್ತವೆ. ಇತರರು ನಿರ್ಮಿಸಿದ ಮನೆಯನ್ನು ಖರೀದಿಸಲು ಬಯಸುವ ಆರ್ಥಿಕವಾಗಿ ಅಶಕ್ತರು ಹಾಗೂ ಕಡಿಮೆ ಆದಾಯ ಗುಂಪಿನವರೂ ಮೇಲ್ಕಾಣಿಸಿದಂತೆ ಕೇಂದ್ರ ಸರ್ಕಾರದ ಸಾಲ ಮತ್ತು ರಾಜ್ಯ ಸರ್ಕಾರದ ವಿವಿಧ ಕಾರ್ಯಕ್ರಮಗಳ ಲಾಭ ಪಡೆಯಬಹುದಾಗಿದೆ.

**ಊ) ಸಾಲದ ನಿಬಂಧನೆಗಳು**

ಮನೆ ನಿರ್ಮಾಣವನ್ನು ಒಂದು ವರ್ಷದೊಳಗಾಗಿ ಪೂರ್ಣಗೊಳಿಸಬೇಕಾಗಿದ್ದು, ಸಾಲವನ್ನು ಮನೆ ನಿರ್ಮಾಣದ ಗತಿಗೆ ಅನುಗುಣವಾಗಿ ನೀಡಲಾಗುವುದು. ಸಾಲದ ನಿಬಂಧನೆಗಳು ಈ ಕೆಳಗಿನಂತಿವೆ.

1 ಆರ್ಥಿಕವಾಗಿ ಅಶಕ್ತ ಹಾಗೂ ಕಡಿಮೆ ಆದಾಯದ ಗುಂಪಿನವರಿಗೆ ಅನುಮತಿಸಿದ ಸಾಲದ ಪೂರ್ಣ ಅವಧಿಗೆ ಸದರಿ ಸಾಲದ ಮೊತ್ತದ ಮೇಲಿನ ಬಡ್ಡಿಗೆ ಸಹಾಯಧನವು ವಾರ್ಷಿಕ ಶೇಕಡ 5ರಷ್ಟು ಇರುತ್ತದೆ.

2. ಸಾಮಾನ್ಯವಾಗಿ ಸಾಲ ಮರುಪಾವತಿ ಅವಧಿಯನ್ನು 15 ರಿಂದ 20 ವರ್ಷಗಳ ಅವಧಿಗೆ ಅನುಮತಿಸಲಾಗುವುದು.

3. ಸಾಲ ನೀಡುವ ಬ್ಯಾಂಕುಗಳು ಭಾರತೀಯ ರಿಜರ್ವ್ ಬ್ಯಾಂಕಿನ ಮಾರ್ಗದರ್ಶಿಕೆಯಂತೆ ಸಮ್ಮತಿಸಿದ ಬಡ್ಡಿದರವನ್ನು ನಿಗದಿಪಡಿಸುತ್ತದೆ.

4. ಫಲಾನುಭವಿಗಳು ನಿಗದಿತ ಅಥವಾ ಅಲ್ಪಕಾಲಿಕ ಬಡ್ಡಿದರವನ್ನು ಆಯ್ಕೆ ಮಾಡಿಕೊಳ್ಳಬಹುದಾಗಿದೆ.

5. ಈ ಯೋಜನೆಯು 2012ಕ್ಕೆ ಮುಕ್ತಾಯಗೊಳ್ಳುತ್ತದೆ.

**ಎ) ಮೇಲುಸ್ತುವಾರಿ**

ನಗರಾಭಿವೃದ್ಧಿ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚನೆಯಾದ ಸಮಿತಿಯು ರಾಜ್ಯ ಮಟ್ಟದಲ್ಲಿನ ಪ್ರಗತಿ ಪರಿಶೀಲನೆಯನ್ನು ಜಿಲ್ಲಾಧಿಕಾರಿಗಳು ಜಿಲ್ಲಾ ಮಟ್ಟದಲ್ಲಿನ ಪ್ರಗತಿ ಪರಿಶೀಲನೆಯನ್ನು ಮತ್ತು ಪೌರಾಡಳಿತ ನಿರ್ದೇಶಕರು ಎಲ್ಲಾ ಜಿಲ್ಲೆಗಳಲ್ಲಿನ ಪ್ರಗತಿ ಪರಿಶೀಲನೆಯನ್ನು ನಿಯತಕಾಲಿಕವಾಗಿ ಕೈಗೊಳ್ಳುವರು. ಜಿಲ್ಲಾಧಿಕಾರಿಗಳು ಮತ್ತು ಪೌರಾಡಳಿತ ನಿರ್ದೇಶಕರು ಕಾರ್ಯಕ್ರಮದ ಅನುಷ್ಠಾನ ಸುಗಮಗೊಳಿಸಲು ನಗರ ಸ್ಥಳೀಯ ಸಂಸ್ಥೆಗಳಿಗೆ ಕಾಲಕಾಲಕ್ಕೆ ಸೂಕ್ತ ಸಲಹೆ–ಸೂಚನೆಗಳನ್ನು ನೀಡುವರು.

**ಜಿ.ವಿ. ಕೊಂಗವಾಡ**

ಪಿ.ಆರ್. 2685 ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ.

**ವಿಷಯ:** ಕಲಘಟಗಿ, ಅಳ್ನಾವರ ಮತ್ತು ಕುಂದಗೋಳ ಪಟ್ಟಣ ಆಶ್ರಯ ಸಮಿತಿಗಳಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ವಇ42 ಹೆಚ್ಎಎಂ 1999 ದಿನಾಂಕ 10.05.2000.

2) ಸರ್ಕಾರದ ಆದೇಶ ಸಂ. ವಇ 18 ಹೆಚ್ ಎಎಸ್ 2008 ದಿನಾಂಕ 16.09.2009.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಹಾಗೂ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತ ಧಾರವಾಡ ಜಿಲ್ಲೆಯ ಕಲಘಟಗಿ, ಅಳ್ನಾವರ ಮತ್ತು ಕುಂದಗೋಳ ಪಟ್ಟಣ ಆಶ್ರಯ ಸಮಿತಿಗಳಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 70 ಹೆಚ್ ಎಎಸ್ 2009, ಬೆಂಗಳೂರು ದಿನಾಂಕ 18ನೇ ನವೆಂಬರ್ 2009**

(1) ಕಲಘಟಗಿ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಕೃಷ್ಣಾ ಡಾಕಪ್ಪ ರಾಠೋಡ | ಪರಿಶಿಷ್ಠ ಜಾತಿ |
| 2 | ಶ್ರೀ ಮಲ್ಲಿಕಾರ್ಜುನ ಮ. ಪುರದನ ಗೌಡ್ರ | ಸಾಮಾನ್ಯ |
| 3 | ಶ್ರೀ ಪಾರ್ಶ್ವನಾಥ ಗುಂಡಪ್ಪ ಬಾಳಿಕಾಯಿ | ಅಲ್ಪಸಂಖ್ಯಾತ |
| 4 | ಶ್ರೀಮತಿ ನಾಗವೇಣಿ ಲಕ್ಷ್ಮಣ ಉಡುಪಿ | ಹಿಂದುಳಿದ ವರ್ಗ |

(2) ಅಳ್ನಾವರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಮೇಶ ಹನುಮಂತ ಕರಡಿಗುಡ್ಡ | ಪರಿಶಿಷ್ಠ ವರ್ಗ |
| 2 | ಶ್ರೀ ನಾಗರಾಜ ಮಡಿವಾಳಪ್ಪ ಕೌಜಲಗಿ | ಸಾಮಾನ್ಯ |
| 3 | ಶ್ರೀ ದಸ್ತಗೀರಸಾಬ ಮೀರಾಸಾಬ ಬೇಪಾರಿ | ಅಲ್ಪಸಂಖ್ಯಾತ |
| 4 | ಕುಮಾರಿ ನಾಗರತ್ನ ಶಿವಾಜೊ ವಾಗಮೋಡೆ | ಹಿಂದುಳಿದ ವರ್ಗ |

(3) ಕುಂದಗೋಳ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀಮತಿ ಕಮಲವ್ವ ಫಕೀರಪ್ಪ ಕುರಹಟ್ಟಿ | ಪರಿಶಿಷ್ಠ ವರ್ಗ |
| 2 | ಶ್ರೀ ಬಸವರಾಜ ತಿರಕಪ್ಪ ಬಾಳಿಕಾಯಿ | ಸಾಮಾನ್ಯ |
| 3 | ಶ್ರೀ ರಾಜು ಈಶ್ವರಪ್ಪ ಕೋಕಾಟೆ | ಅಲ್ಪಸಂಖ್ಯಾತ |
| 4 | ಶ್ರೀ ಮೈಲಾರಲಿಂಗಪ್ಪ ಫಕೀರಪ್ಪ ಕಲಿಬಾರ | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2686

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಸಿಒ 114 ಸಿಎಲ್ಎಸ್ 2009 ದಿನಾಂಕ 26.06.2009.

2) ಸರ್ಕಾರದ ಆದೇಶ ಸಂಖ್ಯೆ : ಸಿಒ 114 ಸಿಎಲ್ಎಸ್ 2009 ದಿನಾಂಕ 13.08.2009.

3) ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ ಯಶಸ್ವಿನಿ/35/2009–10 ದಿನಾಂಕ: 31.08.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಆದೇಶಗಳಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುವಾಗುವಂತೆ ಅನುಕ್ರಮವಾಗಿ ರೂ.10.00 ಕೋಟಿ ಹಾಗೂ ರೂ.3.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು(ಬಳಕೆ ಮತ್ತು ಮಾರಾಟ) 2009–10ನೇ ಸಾಲಿಗೆ ಸಂಬಂಧಿಸಿದಂತೆ ದಿನಾಂಕ:21.08.2009ರ ಅಂತ್ಯಕ್ಕೆ 26.68ಲಕ್ಷ ಸದಸ್ಯರು ನೋಂದಣಿಯಾಗಿದ್ದು ಈ ವರ್ಷ ಸದರಿ ಯೋಜನೆಗೆ ಸುಮಾರು ರೂ 70.00 ಕೋಟಿಗೂ ಮೀರಿ ವೆಚ್ಚವಾಗುವ ಸಾಧ್ಯತೆ ಇರುತ್ತದೆ ಎಂದು ತಿಳಿಸಿ 2009–10ನೇ ಸಾಲಿನ ಆಯವ್ಯಯದಲ್ಲಿ ಕಲ್ಪಿಸಲಾದ ಅನುದಾನದಲ್ಲಿ ಬಾಕಿ ಉಳಿದಿರುವ ರೂ.27.00 ಕೋಟಿಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿದ್ದಾರೆ. ಸದರಿ ಕೋರಿಕೆಯನ್ನು ಹಾಗೂ ದಿನಾಂಕ : 31.10.2009ರ ಅಂತ್ಯಕ್ಕೆ ರೂ.31,81,78,050.00ಗಳ ಮೌಲ್ಯವುಳ್ಳ 32,754 ಪ್ರಕರಣಗಳಲ್ಲಿ ಪೂರ್ವಾನುಮತಿಯನ್ನು ನೀಡಿದ್ದು ಈಗಾಗಲೇ ರೂ 21.79 ಕೋಟಿಗಳ ವೆಚ್ಚವಾಗಿರುವುದನ್ನು ಪರಿಗಣಿಸಿ 2009–10ನೇ ಸಾಲಿಗೆ ನಿಗದಿಯಾದ ಅನುದಾನದ ಪೈಕಿ ರೂ 5.00 ಕೋಟಿಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 114 ಸಿಎಲ್ಎಸ್ 2009, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುವಾಗುವಂತೆ ರೂ.500.00 ಲಕ್ಷಗಳನ್ನು (ರೂಪಾಯಿ ಐದು ಕೋಟಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆಯಡಿ ಈ ಕೆಳಕಂಡಂತೆ ಭರಿಸತಕ್ಕದ್ದು.

2425–00–108–0–57–ಯಶಸ್ವಿನಿ–059–ಇತರೆ ಖರ್ಚು – ರೂ.316.09 ಲಕ್ಷಗಳು
2425–00–108–0–57–ಯಶಸ್ವಿನಿ–422–ವಿಶೇಷ ಘಟಕ ಯೋಜನೆ – ರೂ.123.75 ಲಕ್ಷಗಳು
2425–00–108–0–57–ಯಶಸ್ವಿನಿ–423–ಗಿರಿಜನ ಉಪಯೋಜನೆ – ರೂ.60.16 ಲಕ್ಷಗಳು

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲು ರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರಿಗೆ ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಟ್ರಸ್ಟಿನ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 311 ವೆಚ್ಚ – 2/ 09 ದಿನಾಂಕ: 04.11.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್.ಎಸ್.ಹುಚ್ಚಾಚಾರಿ**
ಪಿ.ಆರ್. 2687 ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಹಾಗೂ ಮಂಗಳೂರು ಸೆಕ್ಟರಿನಡಿಯಲ್ಲಿ 2009ರಿಂದ 2015ರ ವರೆಗೆ 1750 ಹೆಕ್ಟೇರ್ ಕ್ಷೇತ್ರದಲ್ಲಿ ರಬ್ಬರ್ ನೆಡುತೋಪುಗಳನ್ನು ನಿರ್ಮಾಣ ಮಾಡಲು ರಬ್ಬರ್ ಮರು ನಾಟಿಕೆ ಪ್ರಾಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:** 1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ. ಕಅಅನಿನಿ/ಎ3/ರ.ಮ.ನಾ.ಯೋ/2009/2008–09, ದಿನಾಂಕ : 19/01/2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ : 19/01/2009ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ಸೆಕ್ಟರಿನಡಿಯಲ್ಲಿ 2009 ರಿಂದ 2015 ರವರೆಗೆ 1750 ಹೆಕ್ಟೇರ್ ಕ್ಷೇತ್ರದಲ್ಲಿ ರಬ್ಬರ್ ನೆಡುತೋಪುಗಳನ್ನು ನಿರ್ಮಾಣ ಮಾಡಲು ಒಂದು ರಬ್ಬರ್ ಮರು ನಾಟಿಕೆ ಪ್ರಾಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ಕೋರಿದ್ದು, ಈ ರಬ್ಬರ್ ನೆಡುತೋಪುಗಳ ಎಕಾನಾಮಿಕ್ ಲೈಫ್ 31 ರಿಂದ 33 ವರ್ಷಗಳಾಗಿದ್ದು, ನಂತರ ಆ ನೆಡುತೋಪುಗಳಿಂದ ಪಡೆಯುವಂತಹ ರಬ್ಬರ್ ಹಾಲಿನ ಪ್ರಮಾಣ ಕಡಿಮೆಯಾಗುವುದರಿಂದ ಅಂತಹ ಮರಗಳನ್ನು ಕಟಾವು ಮಾಡಿ ಆ ಸ್ಥಳಗಳಲ್ಲಿ ಮರು ನಾಟಿಕೆ ಮಾಡುವುದರ ಮೂಲಕ 1986ನೇ ಸಾಲಿನ ಮಳೆಗಾಲದಿಂದ 2008ನೇ ಸಾಲಿನ ಮಳೆಗಾಲದವರೆಗೆ 2963.40 ಹೆಕ್ಟೇರಿನಷ್ಟು ಕ್ಷೇತ್ರದಲ್ಲಿ ಈಗಾಗಲೇ ಮರು ನಾಟಿಕೆ ಮಾಡಿ ಆ ನೆಡುತೋಪುಗಳನ್ನು ನಿರ್ವಹಿಸಲಾಗುತ್ತಿದ್ದು, ಈಗ ಮುಂದಿನ ಏಳು ವರ್ಷಗಳಲ್ಲಿ ರಬ್ಬರ್ ನೆಡುತೋಪುಗಳ ಎಕಾನಾಮಿಕ್ ಲೈಫನ್ನಾಧರಿಸಿ ಪ್ರತಿ ವರ್ಷ 250.00 ಹೆಕ್ಟೇರ್‌ಗಳಂತೆ ಒಟ್ಟು 1750.00 ಹೆಕ್ಟೇರ್ ಕ್ಷೇತ್ರದಲ್ಲಿ ರಬ್ಬರ್ ಮರು ನಾಟಿಕೆ ಮಾಡಲು ಪ್ರಾಯೋಜನೆಯನ್ನು ರೂ.5621.79 ಲಕ್ಷಗಳ ವೆಚ್ಚದಲ್ಲಿ ತಯಾರಿಸಿ ನಿಗಮದ 217ನೇ ಮಂಡಳಿ ಸಭೆಯಲ್ಲಿ ಚರ್ಚಿಸಿ ಅನುಮೋದನೆ ಪಡೆಯಲಾಗಿದೆಯೆಂದೂ ಹಾಗೂ ಸದರಿ ಪ್ರಾಯೋಜನೆಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸಲಾಗುವುದೆಂದು ತಿಳಿಸಿ, ಪ್ರಸ್ತಾವನೆಗೆ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 26 ಎಫ್‌ಪಿಸಿ 2009 ಬೆಂಗಳೂರು. ದಿನಾಂಕ: 16ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ, ಬೆಂಗಳೂರು ಇವರು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಹಾಗೂ ಮಂಗಳೂರು ಸೆಕ್ಟರಿನಡಿಯಲ್ಲಿ 2009ನೇ ಸಾಲಿನಿಂದ 2015 ರವರೆಗೆ 1750 ಹೆಕ್ಟೇರ್ ಕ್ಷೇತ್ರದಲ್ಲಿ ರೂ.5621.79 (ರೂಪಾಯಿಗಳು ಐವತ್ತಾರು ಕೋಟಿ ಇಪ್ಪತ್ತೊಂದು ಲಕ್ಷದ ಎಪ್ಪತ್ತೊಂಬತ್ತು ಸಾವಿರಗಳು ಮಾತ್ರ) ಲಕ್ಷಗಳಲ್ಲಿ ರಬ್ಬರ್ ನೆಡುತೋಪುಗಳನ್ನು ನಿರ್ಮಾಣ ಮಾಡಲು ರಬ್ಬರ್ ಮರು ನಾಟಿಕೆ ಪ್ರಾಯೋಜನೆಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿದೆ.

ಸದರಿ ಪ್ರಾಯೋಜನೆಗೆ ತಗಲುವ ವೆಚ್ಚವನ್ನು ನಿಗಮದ ಆಂತರಿಕ ಸಂಪನ್ಮೂಲಗಳಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಪಿ.ಆರ್. ಕಲಾವತಿ**
ಪಿ.ಆರ್. 2688 ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2ನೇ ಹಂತದ ನಗರಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ರೂ. 5.00 ಕೋಟಿಗಳನ್ನು ಕಿಯೋನಿಕ್ಸ್ ಸಂಸ್ಥೆಗೆ ಇಕ್ವಿಟಿ ಮೊತ್ತವಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 25/11/2008.
2) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 25–02–2009
3) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 5–10–2009
4) ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್ ಪತ್ರ ಸಂಖ್ಯೆ ಕೆಎಸ್‌ಇಡಿಸಿ/ಎಫ್ & ಎ/2009–10, ದಿನಾಂಕ 03–10–2009

**ಪ್ರಸ್ತಾವನೆ:**

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಘೋಷಣೆಯನ್ನು ಮಾಡಲಾಗಿರುತ್ತದೆ.

"ಹುಬ್ಬಳ್ಳಿ–ಧಾರವಾಡ, ಬೆಳಗಾವಿ, ಗುಲ್ಬರ್ಗಾ, ಶಿವಮೊಗ್ಗ, ದಾವಣಗೆರೆ, ಮಂಗಳೂರು ಮುಂತಾದ ನಗರಗಳಲ್ಲಿ ಖಾಸಗಿ ಸಹಭಾಗಿತ್ವದೊಡನೆ ಹಾಗೂ ಸರ್ಕಾರಿ ಸಂಸ್ಥೆಯಾದ ಕೆಐಎಡಿಬಿ ಜೊತೆಗೂಡಿ ಐಟಿಬಿಟಿ ಪಾರ್ಕ್‌ಗಳನ್ನು ಸ್ಥಾಪಿಸಲು ಉದ್ದೇಶಿಸಿದೆ. ಕಿಯೋನಿಕ್ಸ್ ಸಂಸ್ಥೆಯು ಈ ಸಂಬಂಧ ಸೂಕ್ತ ಕ್ರಮಗಳನ್ನು ಆರಂಭಿಸಲಿದ್ದು, ಈ ಉದ್ದೇಶಕ್ಕಾಗಿ 10 ಕೋಟಿ ರೂ.ಗಳ ಬಂಡವಾಳವನ್ನು ಒದಗಿಸಲಾಗಿದೆ".

ಅದರನ್ವಯ 2008–09ನೇ ಸಾಲಿನ ಆಯವ್ಯಯದಲ್ಲಿನ ಲೆಕ್ಕಶೀರ್ಷಿಕೆ **"5465–01–190–1–13 – ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–59– ಇತರೆ ಖರ್ಚು [ಯೋಜನೆ]"** ಅಡಿಯಲ್ಲಿ ರೂ. 1000.00 ಲಕ್ಷಗಳ ಒದಗಣೆ ಮಾಡಲಾಗಿತ್ತು. ನಂತರ ಸದರಿ ಒದಗಣೆಯನ್ನು ರೂ.500 ಲಕ್ಷಗಳ ಅನುದಾನಕ್ಕೆ ಪರಿಷ್ಕೃತಗೊಳಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ – 25–02–2009ರ ಸರ್ಕಾರಿ ಆದೇಶದಲ್ಲಿ 2ನೇ ಹಂತದ ನಗರಗಳಾದಂತಹ ಮಂಗಳೂರು, ಮೈಸೂರು, ಶಿವಮೊಗ್ಗ, ಬೆಳಗಾಂ, ದಾವಣಗೆರೆ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯ ಷೇರು – ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ – 059–ಇತರೆ ಖರ್ಚು" ಅಡಿಯಲ್ಲಿ ಒದಗಿಸಲಾಗಿರುವ ರೂ 10.00 ಕೋಟಿ ಈಕ್ವಿಟಿ ಅನುದಾನದಲ್ಲಿ ರೂ.5.00 ಕೋಟಿಗಳನ್ನು ಇಕ್ವಿಟಿ ಮೊತ್ತವಾಗಿ ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (1) ಮತ್ತು (3)ರಲ್ಲಿ ಓದಲಾದ ದಿನಾಂಕ 25–11–2008 ಹಾಗೂ ದಿನಾಂಕ 05–10–2009ರ ಸರ್ಕಾರಿ ಆದೇಶದಲ್ಲಿ ಮೈಸೂರು ಮಂಗಳೂರಿನಲ್ಲಿ ರೂ.31.68 ಕೋಟಿ ಹಾಗೂ ಶಿವಮೊಗ್ಗದಲ್ಲಿ ರೂ 15.46 ಕೋಟಿ ವೆಚ್ಚದಲ್ಲಿ ಐಟಿ ಪಾರ್ಕ್‌ಗಳನ್ನು ಕಿಯೋನಿಕ್ಸ್‌ನ ಸ್ವಂತ ಬಂಡವಾಳ ಹಾಗೂ ಖಾಸಗಿ ಸಹಭಾಗಿತ್ವ ಮಾದರಿಯಲ್ಲಿ (PPP Mode) ನಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳನ್ನು ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಈಗಾಗಲೇ ಸರ್ಕಾರದಿಂದ ಅನುಮೋದಿಸಲ್ಪಟ್ಟಿರುವ ಶಿವಮೊಗ್ಗ, ಮಂಗಳೂರು, ಮೈಸೂರು, ಬೆಳಗಾವಿ, ದಾವಣಗೆರೆ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಐಟಿ ಪಾರ್ಕ್ ಸ್ಥಾಪನೆ ಉದ್ದೇಶವನ್ನು ಉಲ್ಲೇಖಿಸಿ, 2009–10ನೇ ಸಾಲಿನ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್ ನಲ್ಲಿ ಸಾಮ್ಯ ಷೇರು– ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ – 059–ಇತರೆ ಖರ್ಚು (ಯೋಜನೆ)" ಅಡಿಯಲ್ಲಿ ಒದಗಿಸಲಾಗಿರುವ ರೂ.5 ಕೋಟಿಗಳ ಸಾಮ್ಯ ಷೇರನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಮಾತಂಇ 38 ಎಂಡಿಎ 2008, ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಕಿಯೋನಿಕ್ಸ್ ಸಂಸ್ಥೆಯವರು ಕಾರ್ಯಗತಗೊಳಿಸುವ ಶಿವಮೊಗ್ಗ, ಮಂಗಳೂರು, ಮೈಸೂರು, ಬೆಳಗಾಂ ಹಾಗೂ ಹುಬ್ಬಳ್ಳಿ– ಧಾರವಾಡದಲ್ಲಿ ಐಟಿ ಪಾರ್ಕ್ ಸ್ಥಾಪಿಸಲು ಅನುವಾಗುವಂತೆ, ಹಂತ 2 ನಗರಗಳಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ –059–ಇತರೆ ಖರ್ಚು(ಯೋಜನೆ)" ಇದರಡಿಯಲ್ಲಿ ಒದಗಿಸಲಾಗಿರುವ ರೂ. 5 ಕೋಟಿಗಳ ಈಕ್ವಿಟಿ ಅನುದಾನದಲ್ಲಿ ರೂ.250.00 ಲಕ್ಷಗಳನ್ನು (ರೂ. ಇನ್ನೂರ

ಐವತ್ತು ಲಕ್ಷಗಳು ಮಾತ್ರ) ಕಿಯೋನಿಕ್ಸ್ ಸಂಸ್ಥೆಗೆ ಈಕ್ವಿಟಿ ಮೊತ್ತವಾಗಿ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

ಈ ಈಕ್ವಿಟಿ ಮೊತ್ತದ ಬಿಡುಗಡೆಯು ಸರ್ಕಾರದ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008 ದಿನಾಂಕ:25.02.2009ರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯ ಷೇರು–ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ –059–ಇತರೆ ಖರ್ಚು(ಯೋಜನೆ)" ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್‌ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು .

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಆಇ 303 ವೆಚ್ಚ –2/2009, ದಿನಾಂಕ 11–11–2009 ಇದರನ್ವಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಪಿ.ಆರ್. 2693 ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಎ.ಬಿ.ವಿನೋದ್‌ಕುಮಾರ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಶ್ಯಾನುಬೋಗನಹಳ್ಳಿ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ:ಸಿ1(8)/ಪಮೂಅ/112/03–04, ದಿನಾಂಕ : 10–10–2005
2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ:ಸಿ1(8)/ಪಮೂಅ/112/03–04, ದಿನಾಂಕ : 10–12–2008.
3) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ: ಸಿ1(8)/ಪಮೂಅ/112/03–04, ದಿನಾಂಕ : 29–5–2007
4) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ:ಸಿ1(8)/ಪಮೂಅ/112/03–04, ದಿನಾಂಕ : 29.5.2007.

**ಪ್ರಸ್ತಾವನೆ:**

ಶ್ರೀ ಎ.ಬಿ.ವಿನೋದ್ ಕುಮಾರ್, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಶ್ಯಾನುಬೋಗನಹಳ್ಳಿ ಇವರು ದಿನಾಂಕ : 26–6–1997 ರಲ್ಲಿ ರೇಷ್ಮೆ ಪ್ರದರ್ಶಕರ ಹುದ್ದೆಗೆ ಕಾರ್ಯವರದಿ ಮಾಡಿಕೊಂಡಿರುತ್ತಾರೆ, ನೌಕರರು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದ ಕಾರಣ ಇವರ ಪರಿವೀಕ್ಷಣಾ ಅವಧಿಯು ಘೋಷಣೆಯಾಗಿರುವುದಿಲ್ಲ. ನೌಕರರು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದದ ಪ್ರಯುಕ್ತ ರೇಷ್ಮೆ ಆಯುಕ್ತರು ಮೇಲೆ ಓದಲಾದ ಕ್ರಮಸಂಖ್ಯೆ(1)ರ ಅಧಿಕೃತ ಜ್ಞಾಪನದಲ್ಲಿ ನೌಕರರನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 5(1)(ಬಿ) ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಿ ಆದೇಶಿಸಿದ್ದು, ಈ ಆದೇಶವು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 6(1)ರ ರಿತ್ಯಾ ಸರ್ಕಾರದ ಸ್ಥಿರೀಕರಣಕ್ಕೆ ಒಳಪಟ್ಟಿದ್ದು, ಸದರಿ ಸ್ಥಿರೀಕರಣದ ನಂತರ ಜಾರಿಗೆ ಬರತಕ್ಕದ್ದೆಂದು ಆದೇಶಿಸಿರುತ್ತಾರೆ, ಸರ್ಕಾರದಿಂದ ಈ ಬಗ್ಗೆ ಸ್ಥಿರೀಕರಣವಾಗದೇ ಸದರಿ ನೌಕರರು ಸೇವೆಯಲ್ಲಿ ಮುಂದುವರೆದ್ದು, ನಿಗದಿತ ಇಲಾಖಾ ಪರೀಕ್ಷೆಯನ್ನು ದಿನಾಂಕ:7–9–2006 ರಂದು ಪಾಸು ಮಾಡಿಕೊಂಡಿರುತ್ತಾರೆ. ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡ ನಂತರ ರೇಷ್ಮೆ ಆಯುಕ್ತರ ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಅಧಿಕೃತ ಜ್ಞಾಪನದಲ್ಲಿ ನೌಕರರನ್ನು ಸೇವೆಯಿಂದ ವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ

ಪಡೆದಿರುತ್ತಾರೆ ಹಾಗೂ ಮೇಲೆ ಓದಲಾದ ಕ್ರಮಸಂಖ್ಯೆ(3)ರ ಅಧಿಕೃತ ಜ್ಞಾಪನದಲ್ಲಿ ನೌಕರರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(ii) ರನ್ವಯ ದಿನಾಂಕ : 26–6–1999 ರಿಂದ 25–6–2000ರವರೆಗೆ ವಿಸ್ತರಿಸಿ ಆದೇಶಿಸಿರುತ್ತಾರೆ. ಹಾಗೂ ಉಳಿದ ಅವಧಿಗೆ ಅಂದರೆ ದಿನಾಂಕ : 26–6–2000 ರಿಂದ ದಿನಾಂಕ : 7–9–2006ರವರೆಗೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಎ.ಬಿ.ವಿನೋದ್ ಕುಮಾರ್. ರೇಷ್ಮೆ ಪ್ರದರ್ಶಕರು, ತಾಂತ್ರಿಕಸೇವಾ ಕೇಂದ್ರ, ಶ್ಯಾನುಬೋಗನಹಳ್ಳಿ ಇವರು ದಿನಾಂಕ: 26–6–1997 ರಂದು ಕಾರ್ಯವರದಿ ಮಾಡಿಕೊಂಡಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಳ್ಳದ ಕಾರಣ ಸೇವೆಯಿಂದ ವಿಮುಕ್ತಿಗೊಳಿಸಲಾಗಿತ್ತು. ಸದರಿ ಆದೇಶವನ್ನು ಸ್ಥಿರೀಕರಿಸುವಂತೆ ಕೋರಲಾಗಿತ್ತು. ಈ ಮಧ್ಯೆ ನೌಕರರು ಬಾಕಿ ಇದ್ದ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡಿದ್ದರಿಂದ ಇಲಾಖೆಯು ಕರ್ನಾಟಕ ನಾಗರೀಕ ಸೇವಾ ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1) (ii)ರನ್ವಯ ದಿನಾಂಕ: 26–6–1999 ರಿಂದ 25–6–2000 ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದೆ. ಸರ್ಕಾರದ ಪತ್ರ ಸಂಖ್ಯೆ : ವಾಕೈ 21 ರೇಇವಿ 2005, ದಿನಾಂಕ : 15–11–2006ರ ಪತ್ರದಲ್ಲಿ ನೌಕರರ ಸೇವೆಯನ್ನು ಮುಂದುವರೆಸಲು ಇಲಾಖೆಯು ತೀರ್ಮಾನಿಸಿದಲ್ಲಿ ನೌಕರರನ್ನು ಸೇವೆಯಿಂದ ವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ ಪಡೆದು ಪರಿವೀಕ್ಷಣಾ ಅವಧಿಗೆ ವಿಸ್ತರಣೆಗೆ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದಂತೆ ಕಾರ್ಯ ವಿಮುಕ್ತಿಗೊಳಿಸಿದ ಆದೇಶವನ್ನು ಹಿಂದಕ್ಕೆ ಪಡೆದಿರುವುದಾಗಿ, ನೌಕರರು ಸೇವೆಯಲ್ಲಿ ಮುಂದುವರೆದಿದ್ದು, ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುವುದರಿಂದ ಹಾಗೂ ತೃಪ್ತಿಕರವಾಗಿ ಕೆಲಸ ನಿರ್ವಹಿಸಿರುವುದರಿಂದ ದಿನಾಂಕ:26–6–2000ರಿಂದ ದಿನಾಂಕ:7–9–2006 ರವರೆಗೆ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿ ಆದೇಶಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ : (4) ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿದ್ದ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ. ಶ್ರೀ ಎ.ಬಿ. ವಿನೋದ್ ಕುಮಾರ್, ರೇಷ್ಮೆ ಪ್ರದರ್ಶಕರು ಇವರು ಸೇವೆಯಲ್ಲಿ ಮುಂದುವರೆದಿದ್ದು, ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡಿಕೊಂಡಿರುವುದರಿಂದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ಇವರ ಪ್ರಕರಣದಲ್ಲಿ ಇವರು ನಿಗದಿತ ಇಲಾಖಾ ಪರೀಕ್ಷೆಯನ್ನು ಪಾಸು ಮಾಡಿಕೊಂಡ ದಿನಾಂಕದವರೆಗೆ ಅಂದರೆ ದಿನಾಂಕ 26–6–2000 ರಿಂದ ದಿನಾಂಕ: 7–9–2006 ರವರೆಗೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 75 ರೇಇವಿ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎ.ಬಿ.ವಿನೋದ್ ಕುಮಾರ್, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(i)ರನ್ವಯ ದಿನಾಂಕ : 26–6–2000ರಿಂದ ದಿನಾಂಕ : 7–9–2006 ರವರೆಗೆ ವಿಸ್ತರಿಸಿದೆ.

ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಿದ ಅವಧಿಗೆ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಅದನ್ನು ಘೋಷಿಸಿದ ನಂತರ ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸಬಹುದು. ಆದರೆ, ವೇತನ ಬಾಕಿಯನ್ನು ನೀಡುವಂತಿಲ್ಲ, ಈ ವಿಷಯದಲ್ಲಿ ಕರ್ನಾಟಕ ನಾಗರೀಕ ಸೇವಾ(ಪರಿವೀಕ್ಷಣಾ) ನಿಯಮಗಳು 1977ರ ನಿಯಮ 10 ರಂತೆ ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2694

**ಭಾರತಿ ಆರ್.ನಾಯಕ್**

ಪೀಠಾಧಿಕಾರಿ (ರೇಷ್ಮೆ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಶ್ರಮಿಸಿದ ಸಂಸ್ಥೆಗಳಿಗೆ ನೀಡುವ ಪ್ರಶಸ್ತಿಗಳ ಸಂಖ್ಯೆಯನ್ನು 01 ರಿಂದ 05ಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ : ಎಸ್.ಡಬ್ಲೂಎಲ್ /153/ಪಿಹೆಚ್‌ಪಿ/91, ದಿನಾಂಕ : 25–07–1992
2) ಸರ್ಕಾರದ ಆದೇಶ ಸಂಖ್ಯೆ : ಮಮಅ 416 ಪಿಹೆಚ್‌ಪಿ 97(ಭಾ), ದಿನಾಂಕ : 23–07–1998
3) ಸರ್ಕಾರದ ಆದೇಶ ಸಂಖ್ಯೆ : ಮಮಅ 552 ಪಿಹೆಚ್‌ಪಿ 2000, ದಿನಾಂಕ: 02–12–2000
4) ಸರ್ಕಾರದ ಆದೇಶ ಸಂಖ್ಯೆ : ಮಮಅ 554 ಪಿಹೆಚ್‌ಪಿ 2001, ದಿನಾಂಕ: 01–12–2001
5) ಸರ್ಕಾರದ ಆದೇಶ ಸಂಖ್ಯೆ : ಮಮಅ 647 ಪಿಹೆಚ್‌ಪಿ 2002, ದಿನಾಂಕ : 18–02–2003
6) ಸರ್ಕಾರದ ಆದೇಶ ಸಂಖ್ಯೆ : ಮಮಇ 338 ಪಿಹೆಚ್‌ಪಿ 2002(ಪಿ), ದಿನಾಂಕ : 20–02–2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಶ್ರಮಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ತಲಾ ಒಂದರಂತೆ ಎರಡು ಪ್ರಶಸ್ತಿಗಳನ್ನು ನೀಡಲಾಗುತ್ತಿದ್ದು, ವೈಯಕ್ತಿಕ ಪ್ರಶಸ್ತಿ ವಿಜೇತರಿಗೆ ರೂ.5000/–ಗಳು ಹಾಗೂ ಸಂಸ್ಥೆಗೆ ರೂ.15,000/–ಗಳ ನಗದು ಹಣ ನೀಡುವುದಕ್ಕೆ ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ವೈಯಕ್ತಿಕ ಪ್ರಶಸ್ತಿ ಹಾಗೂ ಸಂಸ್ಥೆಯ ಪ್ರಶಸ್ತಿ ವಿಜೇತರಿಗೆ ನೀಡಲಾಗುತ್ತಿದ್ದ ನಗದು ಹಣವನ್ನು ಕ್ರಮವಾಗಿ ರೂ 5,000/– ಗಳಿಂದ ರೂ 10,000/–ಗಳಿಗೆ ಹಾಗೂ ರೂ.15,000/– ಗಳಿಂದ ರೂ.25,000/–ಗಳಿಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 03ಕ್ಕೆ ಹೆಚ್ಚಿಸಿದ್ದು, ಮೇಲೆ ಓದಲಾದ (4)ರ ಆದೇಶದಲ್ಲಿ ಈ ಸಂಖ್ಯೆಯನ್ನು 03 ರಿಂದ 05ಕ್ಕೆ ಹಾಗೂ ಮೇಲೆ ಓದಲಾದ (5)ರ ಆದೇಶದಲ್ಲಿ ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 05 ರಿಂದ 06ಕ್ಕೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಆದೇಶದಲ್ಲಿ ವೈಯಕ್ತಿಕ ಪ್ರಶಸ್ತಿಗಳ ಸಂಖ್ಯೆಯನ್ನು 06 ರಿಂದ 08ಕ್ಕೆ ಹೆಚ್ಚಿಸಲಾಗಿದೆ.

ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 23–11–2009ರಂದು ಅಂಗವಿಕಲರಿಗಾಗಿ ಉತ್ತಮ ಸೇವೆ ಸಲ್ಲಿಸಿದ ಅರ್ಹ ವ್ಯಕ್ತಿ/ಸಂಸ್ಥೆಯನ್ನು ಗುರುತಿಸಿ ರಾಜ್ಯ ಪ್ರಶಸ್ತಿಗೆ ಆಯ್ಕೆ ಮಾಡುವ ರಾಜ್ಯ ಮಟ್ಟದ ಸಮಿತಿಯಲ್ಲಿ ಚರ್ಚಿಸಿ, ಸಂಸ್ಥೆಗಳಿಗೆ ಉತ್ತೇಜನ ಹಾಗೂ ಪ್ರೋತ್ಸಾಹ ನೀಡುವ ಹಿತದೃಷ್ಟಿಯಿಂದ, ಅಂಗವಿಕಲರ ಕಲ್ಯಾಣಕ್ಕಾಗಿ ಶ್ರಮಿಸಿದ ಸಂಸ್ಥೆಗಳಿಗೆ ನೀಡಲಾಗುವ ಪ್ರಶಸ್ತಿಯ ಸಂಖ್ಯೆಯನ್ನು ಪ್ರಸ್ತುತ ಇರುವ 1 ರಿಂದ 5ಕ್ಕೆ ಹೆಚ್ಚಿಸಲು ಸಭೆಯಲ್ಲಿ ತೀರ್ಮಾನಿಸಲಾಗಿದ್ದು, ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 338 ಪಿಎಚ್‌ಪಿ 2008, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2009**

ಅಂಗವಿಕಲರ ಕಲ್ಯಾಣಕ್ಕಾಗಿ ಉತ್ತಮ ಸೇವೆ ಸಲ್ಲಿಸಿದ ಸಂಸ್ಥೆಗಳಿಗೆ ನೀಡಲಾಗುವ ಪ್ರಶಸ್ತಿಗಳ ಸಂಖ್ಯೆಯನ್ನು 1 ರಿಂದ 5ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಈ ಯೋಜನೆಯನ್ನು 2009–10ನೇ ಸಾಲಿನಿಂದ ಜಾರಿಗೊಳಿಸಲು ಆದೇಶಿಸಿದೆ. ಈ ಸಂಬಂಧದ ವೆಚ್ಚವನ್ನು ಲೆಕ್ಕಶೀರ್ಷಿಕೆ 2235–02–101–0–99(ಯೋಜನೆ) ಉಪಲೆಕ್ಕಶೀರ್ಷಿಕೆ 100 ಧನಸಹಾಯ ಪರಿಹಾರ ಅಡಿಯಲ್ಲಿ ಲಭ್ಯವಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕಮಲಮ್ಮ**

ಪಿ.ಆರ್. 2698 ಸರ್ಕಾರದ ಅಧೀನ ಕಾರ್ಯದರ್ಶಿ–2

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸೇವೆಗೆ ಅನಧಿಕೃತ ಗೈರು ಹಾಜರಾಗಿರುವ ವೈದ್ಯಾಧಿಕಾರಿಗಳನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪತ್ರ ಸಂಖ್ಯೆ : ಡಿಪಿಜಿ/ಗುವಿ/17/ 2009–10 ದಿನಾಂಕ : 14/09/2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ವರದಿ ಮಾಡುತ್ತಾ, ಬಳ್ಳಾರಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಈ ಕೆಳಕಂಡ 6 ವೈದ್ಯಾಧಿಕಾರಿಗಳು ಅನಧಿಕೃತ ಗೈರು ಹಾಜರಾಗಿದ್ದು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಬಳ್ಳಾರಿ ಇವರು ಕಾರಣ ಕೇಳಿ ಜಾರಿ ಮಾಡಿದ ನೋಟೀಸಿಗೆ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

| ಕ್ರ. | ಆಯ್ಕೆ ಪಟ್ಟಿಯ ಕ್ರ.ಸಂ. | ವೈದ್ಯಾಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳ | ಕರ್ತವ್ಯಕ್ಕೆ ಗೈರು ಹಾಜರಿಯಾದ ದಿನಾಂಕ | ನೇಮಕಾತಿ ಹೊಂದಿದ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|---|
| 1 | 286 | ಡಾ: ಇ.ಚಂದ್ರಮೋಹನ್ ಪ್ರಾ.ಆ.ಕೇಂದ್ರ, ಬೆಣಕಲ್ಲು, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | 31/03/2009 | ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09/01/2009 |

| ಕ್ರ. | ಆಯ್ಕೆ ಪಟ್ಟಿಯ ಕ್ರ.ಸಂ. | ವೈದ್ಯಾಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳ | ಕರ್ತವ್ಯಕ್ಕೆ ಗೈರು ಹಾಜರಿಯಾದ ದಿನಾಂಕ | ನೇಮಕಾತಿ ಹೊಂದಿದ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|---|---|
| 2 | 616 | ಡಾ: ಶ್ರೀಧರ<br>ಸ.ಆ.ಕೇಂದ್ರ, ತೆಕ್ಕಲಕೋಟೆ, ಸಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ | 20/03/2009 | ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09/01/2009 |
| 3 | 737 | ಡಾ: ರಮೇಶ್ ಕುಮಾರ್<br>ಸ.ಆ.ಕೇಂದ್ರ,ತೆಕ್ಕಲಕೋಟೆ, ಸಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ | 20/03/2009 | ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09/01/2009 |
| 4 | 355 | ಡಾ:ವಿಜಯಲಕ್ಷ್ಮಿ ಡಿ<br>ಪ್ರಾ..ಆ.ಕೇಂದ್ರ, ಬಂಡ್ರಿ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ | 10/03/2009 | ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09/01/2009 |
| 5 | 492 | ಡಾ:ಸೈಯದ್ ಅಹ್ಮದ್ ಸಲೀಂ<br>ಪ್ರಾ.ಆ.ಕೇಂದ್ರ, ಮೆಟ್ರಿಕ್, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ | 10/03/2009 | ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ:09/01/2009 |
| 6 | 110 | ಡಾ:ರಮೇಶ್ ರಾಜ್<br>ಪ್ರಾ.ಆ.ಕೇಂದ್ರ, ಸೋಗಿ,ಬಳ್ಳಾರಿ ಜಿಲ್ಲೆ | 10/08/2008 | ಆಕುಕ 122 ಹೆಚ್‌ಎಸ್‌ಹೆಚ್ 2007 ದಿನಾಂಕ:08/02/2008 |

ಆದ್ದರಿಂದ ಮೇಲ್ಕಂಡ ವೈದ್ಯಾಧಿಕಾರಿಗಳು ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಗೈರು ಹಾಜರಾಗಿರುವ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 442 ಹೆಚ್‌ಎಸ್‌ಹೆಚ್ 2009 ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಈ ಕೆಳಕಂಡ ವೈದ್ಯಾಧಿಕಾರಿಗಳು ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದರಿಂದ ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತವಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಗಳು 1977 ರ ನಿಯಮ 6(1) (2) ರಡಿಯಲ್ಲಿ ಅವರುಗಳ ಹೆಸರಿನ ಮುಂದೆ ತೋರಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

| ಕ್ರ. ಸಂ | ವೈದ್ಯಾಧಿಕಾರಿಗಳ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳ | ಸೇವೆಯಿಂದ ವಿಮೋಚನೆ ಗೊಳಿಸಿದ ದಿನಾಂಕ |
|---|---|---|
| 1 | ಡಾ: ಇ ಚಂದ್ರ ಮೋಹನ್<br>ಪ್ರಾ.ಆ.ಕೇಂದ್ರ, ಬೆಣಕಲ್ಲು, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | 31/03/2009 |
| 2 | ಡಾ: ಶ್ರೀಧರ<br>ಸ.ಆ.ಕೇಂದ್ರ, ತೆಕ್ಕಲಕೋಟೆ, ಸಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ | 20/03/2009 |
| 3 | ಡಾ:ರಮೇಶ್ ಕುಮಾರ್<br>ಸ.ಆ.ಕೇಂದ್ರ, ತೆಕ್ಕಲಕೋಟೆ, ಸಿರಗುಪ್ಪ, ತಾಲ್ಲೂಕು, ಬಳ್ಳಾರಿ ಜಿಲ್ಲೆ | 20/03/2009 |
| 4 | ಡಾ:ವಿಜಯಲಕ್ಷ್ಮಿ ಡಿ.<br>ಪ್ರಾ.ಆ.ಕೇಂದ್ರ, ಬಂಡ್ರಿ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ | 10/03/2009 |
| 5 | ಡಾ:ಸೈಯದ್ ಅಹ್ಮದ್ ಸಲೀಂ<br>ಪ್ರಾ.ಆ.ಕೇಂದ್ರ, ಮೆಟ್ರಿಕ್, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ | 10/03/2009 |
| 6 | ಡಾ:ರಮೇಶ್ ರಾಜ್<br>ಪ್ರಾ.ಆ.ಕೇಂದ್ರ, ಸೋಗಿ, ಬಳ್ಳಾರಿ ಜಿಲ್ಲೆ | 10/08/2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು –1)

ಪಿ.ಆರ್. 2699

**ವಿಷಯ:** ಡಾ: ಎಂ.ಸಿ.ಪ್ರಭಾಕರ್, ವೈದ್ಯಾಧಿಕಾರಿ, ಐ.ಪಿ.ಪಿ–8 ಆರೋಗ್ಯ ಕೇಂದ್ರ, ತೊಣಚಿಕೊಪ್ಪಲು, ಮೈಸೂರು ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ :ಜೆ ಆರ್ ಒ(2) 251/ 2007–08 ದಿನಾಂಕ:18/06/2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ:ಎಂ.ಸಿ.ಪ್ರಭಾಕರ್, ಇವರು ದಿನಾಂಕ: 29/11/2002 ರಂದು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಸೇವೆಗೆ ಸೇರಿದ್ದು, ಅನಿವಾರ್ಯ ಕಾರಣಗಳಿಂದ ದಿನಾಂಕ: 01/09/2008 ರಂದು ಹುದ್ದೆಗೆ ರಾಜೀನಾಮೆ ಸಲ್ಲಿಸಿ ದಿನಾಂಕ : 01/11/2008 ರಿಂದ ರಾಜೀನಾಮೆಯನ್ನು ಒಪ್ಪಿಕೊಳ್ಳುವಂತೆ ಕೋರಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ:01/11/2008 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 231 ಹೆಚ್ಎಸ್ಹೆಚ್ 2009 ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಡಾ: ಎಂ.ಸಿ.ಪ್ರಭಾಕರ್, ವೈದ್ಯಾಧಿಕಾರಿ, ಐ.ಪಿ.ಪಿ–8 ಆರೋಗ್ಯ ಕೇಂದ್ರ, ತೊಣಚಿಕೊಪ್ಪಲು, ಮೈಸೂರು ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ: 01/11/2008 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2700 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು–1)

**ವಿಷಯ:** ಡಾ: ಪ್ರತಿಭಾ ವಿ.ಪಾಸ್ತೆ, ದಂತ ಆರೋಗ್ಯಾಧಿಕಾರಿ, ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ,

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ : ಎಲ್ಆರ್ಓ 41/2008–09 ದಿನಾಂಕ:06/05/2009

**ಪ್ರಸ್ತಾವನೆ:**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಮೇಲೆ ಓದಲಾದ ಪತ್ರದಲ್ಲಿ ಡಾ: ಪ್ರತಿಭಾ ವಿ.ಪಾಸ್ತೆ, ದಂತ ಆರೋಗ್ಯಾಧಿಕಾರಿ, ಇವರು ಸರ್ಕಾರಿ ಆದೇಶ ಸಂಖ್ಯೆ: ಆಕುಕ 10 ಹೆಚ್ಎಸ್ಡಿ 2002 ದಿನಾಂಕ: 16/08/2002ರ ಪ್ರಕಾರ ದಿನಾಂಕ: 31/08/2002 ರಂದು ಸೇವೆಗೆ ಸೇರಿದ್ದು. ದಿನಾಂಕ: 01/06/2008 ರಿಂದ 31/08/2001ರ ವರೆಗೆ ಅಸಾಧಾರಣ ರಜೆ ಮಂಜೂರು ಮಾಡಿ ಕೆ.ಎಲ್.ಇ ಸಂಸ್ಥೆ, ಬೆಳಗಾಂ ಇಲ್ಲಿ ಖಾಸಗಿಯಾಗಿ ಸ್ನಾತಕೋತ್ತರ ವ್ಯಾಸಂಗ ನಡೆಸಲು ಅನುಮತಿ ನೀಡಲಾಗಿತ್ತು ನಂತರ ಸದರಿ ವೈದ್ಯರು ರಾಜೀನಾಮೆ ಸಲ್ಲಿಸಿ, ಅಸಾಧಾರಣ ರಜೆ ಮಂಜೂರು ಮಾಡಿದ ದಿನಾಂಕ: 01/06/2008 ರಿಂದ ಅಂಗೀಕರಿಸುವಂತೆ ಕೋರಿರುತ್ತಾರೆ. ಇವರ ವಿರುದ್ದ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲ ಮತ್ತು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 01/06/2008 ರಿಂದ ಜಾರಿಗೆ ಬರುವಂತೆ ರಾಜೀನಾಮೆಯನ್ನು ಅಂಗೀಕರಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 194 ಹೆಚ್ಎಸ್ಹೆಚ್ 2009 ಬೆಂಗಳೂರು, ದಿನಾಂಕ: 21ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಡಾ: ಪ್ರತಿಭಾ ವಿ.ಪಾಸ್ತೆ, ದಂತ ಆರೋಗ್ಯಾಧಿಕಾರಿ, ಪ್ರಸ್ತುತ ಕೆ.ಎಲ್.ಇ ಸಂಸ್ಥೆ, ಬೆಳಗಾಂ ಇಲ್ಲಿ ಸ್ನಾತಕೋತ್ತರ ವ್ಯಾಸಂಗ ನಡೆಸುತ್ತಿರುವ ಇವರು ತಮ್ಮ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ : 01/06/2008ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಅಂಗೀಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ. ಹೇಮನಾಥ್**

ಪಿ.ಆರ್. 2701 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಸೇವೆಗಳು –1)

**FINANCE SECRETARIAT**

**Sub:** HRA and CCA to state Government employees posted to any place situated within 8 Kms. From the periphery of Municipal limits of Bangalore city corporation-reg

**Read:** 1) G.O.No. FD 4 SRP 1980, dated : 22-03-1980
2) G.O. No. FD 19 SRP 1999, dated : 10-08-1999
3) Government Notification UDD 92 MNY 2006 dated 16-01-2007.

**Preamble:**

In Government order No. FD 4 SRP 1980 dated 22nd March 1980 read at (1) above, orders were issued extending the benefit of city rates of HRA and CCA to the Government employees posted to any place situated within a distance of 8 Kms. From the periphery of the Municipal limits of Bangalore city corporation with effect from 1st March 1980 subject to certain conditions and this benefit was continued from time to time.

In Government Notification No.UDD 92 MNY 2006 dated 16-01-2007 read at (3) above, the Bangalore Mahanagara palike was re-constituted as Bruhat Bangalore Mahanagara palike by including BMP areas, 7 CMCs, 1 TMC and 110 Villages in addition. Consequent to this significant all – round expansion in the territorial limits of BBMP, Government has reviewed the system of grant of city rates of HRA and CCA to the Government employees posted to any place situated within a distance of 8 Kms. From the periphery of Municipal limits of Bangalore city corporation and the following orders are issued.

**Order No.FD 4 SRP 2009, Bangalore, 2009, Dated: 31st Ooctober 2009**

The existing system of payment of city rates of HRA and CCA to Government employees posted to any place situated within a distance of 8 Kms. From the periphery of Municipal limits of Bangalore city corporation contemplated in G.O.No. FD 4 SRP 80 dated 22-3-1980 shall stand discontinued with effect from 1st October 2009. Consequently, with effect from 1-10-2009, the Government employees posted to any place situated within the jurisdiction of BBMP only are entitiled for city rates of HRA and CCA.

By Order and in the name of the Governor of Karnataka

P.R. 2702

**SUNDARA RAJA GUPTHA**

Deputy Secretary to Government, Finance Department (services-2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಇಲಾಖೆಗಳ ಪ್ರಧಾನ ಕಾರ್ಯದರ್ಶಿ ಹುದ್ದೆಗಳನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1) ಅಧಿಸೂಚನೆ ಸಂಖ್ಯೆ ಸಿಆಸುಇ 442 ಎಸ್‌ಎಎಸ್ 2009, ದಿನಾಂಕ 30–10–2009
2) ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 442 ಸೇಅಸೆ 2009(ಭಾಗ–2) ದಿನಾಂಕ 12–11–2009

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಹಲವಾರು ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿ ಹುದ್ದೆಗಳಿಗೆ ಅಧಿಕಾರಿಗಳನ್ನು ವರ್ಗಾಯಿಸಿ ನೇಮಿಸಲಾಗಿದ್ದು, ಮೇಲೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಅಧಿಕಾರಿಗಳು ವರ್ಗಾವಣೆಗೊಂಡ ಹಿನ್ನಲೆಯಲ್ಲಿ ಕೆಲವು ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಗಳನ್ನು ಉನ್ನತೀಕರಿಸಿ ಆದೇಶ ಹೊರಡಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 583 ಸಅಸೇ 2009 ಬೆಂಗಳೂರು, ದಿನಾಂಕ: 20ನೇ ನವಂಬರ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಈ ಕೆಳಕಂಡ ಇಲಾಖೆಗಳ ಕಾರ್ಯದರ್ಶಿಗಳ ಹುದ್ದೆಗಳನ್ನು ಅಪರ ಮುಖ್ಯ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ :

1) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ
2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ

**ವೇತನ ಶ್ರೇಣಿ : ರೂ. 80,000–00 (ನಿಗಧಿತ)**

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 2703

**HEALTH AND FAMILY WELFARE SECRETARIAT**

**Sub:** Stengthening Information Education Communication (IEC) cell at Directorate of Heath and Family Welfare Services-reg.

**Read:** 1) Aide Memoire of the International Development Association implementation Support Mission of May 2009.

2) Proceedings of the 4th Meeting of the Project Governing Board, dt. 24-07 2009.

**Preamble:**

The Karnataka Health System Development and Reform Project envisages Strengthening of the existing facilities so that improved quality in services provided can be ensured. In order to improve the Health status of the Vulnerable groups in particular and the whole community in general, IEC/BCC approach is to reach the unreached with multipronged intervention to create awareness, generate demand and to avail all health facilities available to achieve the set goal under RCH-II.

Communication for Behaviour Change is a systematic, planned and evidence based strategic process that is intrinsically linked to programme elements, uses consultation and participation of children, families, communities, loal institutions and networks, and relies on a mix of communication tools, channels and approaches, to promote positive and measurable behaviour change to achieve the set goals. To plan, implement and monitor these activities require various category of professionals.

Keeping the above in view to improve overall capacity of the State IEC Cell for strategic communication, the IEC Cell needs to be strengthened. This was also mentioned in the Aide Memoire read at (1) above. Hence, the subject was placed before the 4th meeting of the project Governing Board held on 14-7-2009.After discussions, the Board agreed for the strengthening of the IEC Cell in the directorate of Health and Family welfare by Creating additional posts.

Hence, the following order.

**Govt Order No: HFW (PR) 107 WBA 2009 Bangalore, Dated: 24th November 2009**

Under the circumstances mentioned in the preamble, government are hereby pleased to approve the strengthening of IEC Cell in the Directorate of Health and Family Welfare Services by creating temporary additional posts as in Annexure.

The temporary posts will remain concurrent with the project period. Hiring of personnel shall be by following relevant procedures/guridelines.

The Cell will carryout the assignments as per its responsibilities. The work of the Cell with be regularly monitored and supervised by the project and senior officers of the Department as per instructions issued by the Government from time to time. The Joint Director (IEC), Directorate of Health and Family welfare services, Bangalore, will be the head of the Cell.

The Project will assess the need for continuing the cell in the Directorate of health and Family welfare Services after the project period and accordingly propose the same to the Government.

Approval is also given for the estimated budget of Rs. 55.68 Lakhs per annum as in Annexure for strengthening the cell and its functioning unit at the district level and expenditure to be incurred thereon. The expenditure shall be, incurred under the Head of Account "22-10-06-800-0-81" under the Management and Evaluation of KHSDRP for the Corresponding financial year.

By Order and in the name of the Governor of Karnataka
**M. SHASHIDHAR**
Deputy Secretary to Govt KHSDRP
Health and Family welfare Department.

**Annexure to Government Order No. HFW (PR) 107 WBA 2009, Bangalore, Dated: 24th November 2009**

**Details of the existing staffing pattern, budget requirements and the posts to be created, other facilities for strengthening IEC Cell in the Directorate of Health and Family Welfare**

| Sl. No. | Desig nation | Exsting Position | | | No. of Posts | Pay Scales | Total Emolume Nts/ Month (Existing) | Proposed posts | No. of Posts | Proposed Pay/ month | Total Emolu Ments/ Month For all Posts | Mode of Filling up | Remarks |
|---|---|---|---|---|---|---|---|---|---|---|---|---|---|
| | | S | W | V | | | | | | | | | |
| | **Professional** | | | | | | | | | | | | |
| 1. | Joint Director | 1 | 1 I/C | - | 1 | 20,025 28,275 | 35,400/- | - | - | - | | Do. HFW | |
| 2. | Deputy Directors | 2 | - | 2 | 2 | 18,150 26,925 | 70,000/- | Communication Expert (Post Grauate in Social Science/ Communication) | 1 | 60,000 | 60,000 | Hiring | To hire experts against vacant Post mass |
| | | | | | | | | Training Expert on Behavioural Change Communication/ Social Marketing (Post graduate in Sociology/ Psychology with good experience in training programmes in Social Sector) | 1 | 50,000 | 50,000 | Hiring | |
| 3. | Field Publicity Officer | 1 | - | 1 | 1 | 14,050-25,050 | 30,000 | Media Planner (Post Graduate in Mass Communication) | 1 | 60,000 | 60,000 | Hiring | |
| 4. | Health Education officer | 1 | 1 | - | 1 | 14,050-25,050 | 30,000 | | | NA | NA | NA | Salary being borne on State Sector |
| 5 | Editor | 1 | - | 1 | 1 | 14,050-25,050 | 30,000 | Editor Post Graduate in Mass Communication/ Journalism) | 1 | 40,000 | 30,000 | Hiring | To hire experts against vacant post |

| Sl. No. | Desig nation | Exsting Position | | | No. of Posts | Pay Scales | Total Emolume Nts/ Month (Existing) | Proposed posts | No. of Posts | Proposed Pay/ month | Total Emolu Ments/ Month For all Posts | Mode of Filling up | Remarks |
|---|---|---|---|---|---|---|---|---|---|---|---|---|---|
| | | S | W | V | | | | | | | | | |
| 6 | Assistant Editors | 2 | - | 2 | 2 | 12,000 22,650 | 60,000/- | Creative Art Designer | 1 | 45,000 | 45,000 | Hiring | To hire experts against vacant post |
| | | | | | | | | Monitoring & Evaluation and IT Expert (Post graduate In Sociology / Economic / Statistic with through knowledge in computer application) | 1 | 30,000 | 30,000 | Hiring | |
| 7. | Programme Assistant | 1 | - | 1 | 1 | 1,800 20.025 | 25,000/- | Data Programmer/ Analyst (Post graduate in Computer Application) | 1 | 20,000 | 20,000 | Hiring | |
| 8. | Dy. Health Education Officer | 1 | 1 | - | 1 | 10,800 20,025 | 25,000/- | NA | NA | NA | NA | NA | Salary being borne on State Sector |
| 9. | Sr. Projectionist | 1 | 1 | - | 1 | 10,000 18,150 | 22,000/- | NA | NA | NA | NA | NA | |
| 10. | Photograp her | 1 | 1 I/C | - | 1 | 10,000 18,150 | 22,000/- | NA | NA | NA | NA | NA | |
| 11. | Dark Room Assistant | 1 | 1 | - | 1 | 8000 14,800 | 16,000/- | NA | NA | NA | NA | NA | |

| Sl. No. | Desig nation | Exsting Position | | | No. of Posts | Pay Scales | Total Emolume Nts/ Month (Existing) | Proposed posts | No. of Posts | Proposed Pay/ month | Total Emolu Ments/ Month For all Posts | Mode of Filling up | Remarks |
|---|---|---|---|---|---|---|---|---|---|---|---|---|---|
| | | S | W | V | | | | | | | | | |
| | | | | | | | **Ministerial** | | | | | | |
| 12. | Stenog-rapher | 1 | 1 | - | 1 | 7,275 13,350 | 13,000/- | Any Bachelor degree with Shorthand Diploma in Computer Science | 1 | 7,275 13.350 (13,000) | 13,000 | Dept or Hiring | |
| 13. | First Division Assistant | 1 | 1 | - | 1 | 7,275 13,350 | 15,000/- 1=15,000 | Any Degree with Diploma in Computer Science | 2 | 7,275 13.350 (10,500) | 10,500 | Dept or hiring | Preferably on deputation from the Department |
| 14. | Typist | 1 | 1 | - | 1 | 5,800 10500 | 10,000/- | 10th with Diploma in computer Science Knowledge in English & Kannada | 1 | 5,800 10,500 (8,000) | 8,000 | Dept or hiring | By KHSDRP |
| | | | | | | | | Computer operators/ Data Entry Operators | 2 | 5,800 10,500 (8,000) | 16,000 | hiring | Approval Taken in PGB for creating 2 new posts of Data Entry Operators/ Typists and hire their services from Man power agency |
| 15. | Diver | 3 | 1 | 2 | 3 | 5,800 10500 | 33,000x1= 33,000 | NA | NA | NA | NA | NA | One driver's salary is presently borne on State funds |

| Sl. No. | Desig nation | Exsting Position | | | No. of Posts | Pay Scales | Total Emolume Nts/ Month (Existing) | Proposed posts | No. of Posts | Proposed Pay/ month | Total Emolu Ments/ Month For all Posts | Mode of Filling up | Remarks |
|---|---|---|---|---|---|---|---|---|---|---|---|---|---|
| | | S | W | V | | | | | | | | | |
| | | | | | | | | **Group `D'** | | | | | |
| 16. | Office Attenders | 4 | 3 | 2 | 4 | 4,800-7,275 | 10,000x4 40,000/- | As Per Sanctioned Strength | 2 | 4,800 7,275 (6,700) | 13,400 | One Post on hire basis against sanctioned opst. | Approval Taken in PGB for creating 1 new posts of Group - D and hire their services from Man power agency. In all 2 Posts will be hired one against one against sanctioned and 1 against created Post respectively |
| | | | **Total** | | **21** | | **4,90,400/-** | | **15** | | **3,55,900** | | |

| | | | | | | | | | |
|---|---|---|---|---|---|---|---|---|---|
| | Grand Total No of Posts in IEC Section 21<br>Grand Total of Posts proposed for hiring:<br>14 (out of these 3 have been newly | | | | | | | | |
| | Created I,e., 2 Posts or Data Entry operators & 1 post of Group "D") | | | | | | | | |
| | Total budget required (in Rs) per year for Govt Staff., i.e., sanctioned working posts, including Steno, FDA, Typists (If taken on deputation), excluding | 58,84,800 | | | | | | | |
| | 10% of total towards TA + Office expense | 5,88,480 | | | | | | | |
| | Total budget required | 64,73,280 | | | | | | | |

| | | | | | | | | |
|---|---|---|---|---|---|---|---|---|
| | Total budget required (in Rs) per year for Govt Staff., i.e., those to be hired/to be taken on deputation : (3,55,900x12) | 42,70,080 | | | | | | |
| | 10% of total towards TA + Office expense | 4,27,080 | | | | | | |
| | Budget required for hiring vechicle as per Govt. rules (Amt. In Rs. Approx,) per year | 2,40,000 | | | | | | |
| | Total budget required towards pay and allowances, vechicle hiring. | 49,37,880 | | | | | | |

**Other Requirements for Setting up the Cell**

| Sl. No | Requirement | Nos. | Approximate cost in Rs. |
|---|---|---|---|
| 1. | Laptops | Six(6) | 3,00,000 |
| 2 | Data Crads | Six(6) | 26,700 |
| 3. | Desktops | Two(2) | 60,000 |
| 4. | Desktop | One (1) with Adobe Photoshop, page Maker, Coral Draw Software with high speed along with UPS 500 GB Hard Disk, 4MB memory card<br>21$^{st}$ U-sonic Black Monitor, 1 GB Graphic Crad | 70,000 |
| 5. | Scanner A-3 Size | One | 8,5000 |
| 6. | Colour inkjet printer | One | 20,000 |
| 7. | Stationery | A-4: 120 reams per year A-3, 24 reams per year | 60,000 |
| 8. | C.Ds (rewritable) or otherwise as per requirement) | 2 boxes of ten per month x 12 | 3,000 |
| 9. | Pen Drive | 12 Nos-4GB & 1 Nos-8 GB | 6,000 |
| | | **Total** | 6,30,700 |

* Grand Total=Rs. 49,37,880+6,30,700=55,68,580 (Rs. Sixty eight lakhs eighty seven thousand two hundred and Sixty only)

* the Project funds can be utilized to incur expensiture for strengthening the IEC Cell till the close of the project period, after which the actual staff required for the Cell can be reassessed.

**M. SHASHIDHAR**

Deputy Secretary to Govt KHSDRP, Department of Health and Family welfare

P.R. 2704

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಹೆಚ್. ಜೇಗರಕಲ್, ಪೊಲೀಸ್ ಇನ್ಸ್‌ಪೆಕ್ಟರ್, ಶಾಸಕರ ಭವನ ಪೋಲಿಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)78/2005–06 ದಿನಾಂಕ : 28–06–2008

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ :28–07–08

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)78/2005–06 ದಿನಾಂಕ : 24–12–08

4) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 223 ಸಿಎನ್‌ಎಸ್ 08 ದಿನಾಂಕ:12.05.09

**ಪ್ರಸ್ತಾವನೆ:**

ಶ್ರೀ ಎಸ್.ಹೆಚ್. ಜೇಗರಕಲ್, ಪೊಲೀಸ್ ಇನ್ಸ್‌ಪೆಕ್ಟರ್, ಶಾಸಕರ ಭವನ ಪೊಲೀಸ್ ಠಾಣೆ, ಬೆಂಗಳೂರು, ಇವರು ಬೆಂಗಳೂರಿನ ಏರ್ ಪೋರ್ಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಅಧಿಕಾರ ದುರುಪಯೋಗ, ದುರ್ನಡತೆ ಹಾಗೂ ಕರ್ತವ್ಯಚ್ಯುತಿಯ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

ಶ್ರೀ ಎಸ್ .ಹೆಚ್.ಜೇಗರ್‌ಕಲ್, ಪೊಲೀಸ್ ಇನ್ಸ್‌ಪೆಕ್ಟರ್ ಏರ್‌ಪೋರ್ಟ್ ಪೊಲೀಸ್ ಠಾಣೆ, ಹಾಲಿ ನಗರ ವಿಶೇಷ ಶಾಖೆ, ಬೆಂಗಳೂರು ನಗರ ಆದ ನೀವು ಈ ಹಿಂದೆ ಏರ್‌ಪೋರ್ಟ್ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಶ್ರೀ ಸಾದಿಕ್ ಸುಹೇಲ್, ಮಾಲೀಕರು, ಮೆ: ಅಡ್ ಇಂಡಿಯಾ ಅಡ್ವರ್ಟೈಸಿಂಗ್ ರವರೊಂದಿಗೆ ಶಾಮೀಲಾಗಿ, ಶ್ರೀ ಬಿ.ಪಿ.ಅಬ್ದುಲ್ ರಹೀಂ ಮತ್ತು ಅವರ ಸಹೋದರ ಶ್ರೀ ಬಿ.ಪಿ.ರೆಹಮಾನ್, ಎಂ.ಡಿ.ಮೆ: ಡೈಮೆಂಡ್ ಪಬ್ಲಿಸಿಟಿ ಇಂಡಿಯಾ, ಬೆಂಗಳೂರು ರವರಿಗೆ ದಿ:14–12–2004ರಂದು ಬೆಳಿಗ್ಗೆ 11–00 ಗಂಟೆಯಿಂದ ರಾತ್ರಿ 11–00 ಗಂಟೆಯವರೆಗೆ ಅನಾವಶ್ಯಕವಾಗಿ ಠಾಣೆಯಲ್ಲಿ ಕೂರಿಸಿ, ಅವರಿಗೆ ಹಿಂಸೆ ನೀಡಿ, ಹೆದರಿಸಿ ಒತ್ತಾಯ ಪೂರ್ವಕವಾಗಿ 73,00,000–00 ರೂ ಚೆಕ್‌ಗೆ ಮತ್ತು ಇತರೆ ದಾಖಲಾತಿಗಳಿಗೆ ಸಹಿ ಹಾಕಿಸಿಕೊಂಡಿರುತ್ತೀರಿ ಹಾಗೂ ಅಪರಾಧಿಗಳ ವಿರುದ್ಧ ಮಾನ್ಯ 10ನೇ ಎ.ಸಿ.ಎಂ.ಎಂ ನ್ಯಾಯಾಲಯವು ಅರೆಸ್ಟ್ ವಾರೆಂಟ್ ಹೊರಡಿಸಿದ್ದರೂ ಸಹ ಅವರನ್ನು ಅರೆಸ್ಟ್ ಮಾಡದೇ ಬಿಟ್ಟಿರುತ್ತೀರಿ, ಈ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಅಧಿಕಾರದ ದುರುಪಯೋಗ, ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುತ್ತೀರಿ.

ನೀವು ಶಿಸ್ತಿನ ಇಲಾಖೆಯಲ್ಲಿದ್ದು, ಅಧಿಕಾರ ದುರುಪಯೋಗ ಪಡಿಸಿಕೊಳ್ಳುವ ಹವ್ಯಾಸ ಬೆಳೆಸಿಕೊಂಡು ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಗೋಚರವಾಗುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 28–06–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ, ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸುವ ಕುರಿತು ಕರ್ನಾಟಕ ಲೋಕಸೇವಾ ಆಯೋಗವನ್ನು ಸಮಾಲೋಚಿಸಲಾಗಿದ್ದು, ಮೇಲೆ ಓದಲಾದ (5)ರ ಪತ್ರದಲ್ಲಿ ಆಯೋಗವು ಸಹಮತಿಸದೇ ಶಿಸ್ತು ಪ್ರಾಧಿಕಾರದ ದಂಡನೆಯನ್ನು ಎತ್ತಿಹಿಡಿದಿರುವ ಅಂಶವನ್ನು ಸರ್ಕಾರವು ಪರಿಶೀಲಿಸಿ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 246 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಹೆಚ್. ಜೇಗರಕಲ್ ಪೊಲೀಸ್ ಇನ್ಸ್‌ಪೆಕ್ಟರ್ ಶಾಸಕರ ಭವನ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2705

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ:** ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 147 ಆರ್‌ಇಹೆಚ್ 2004 (ಭಾಗ–4) ದಿನಾಂಕ: 10–1–2006.

2) ಸರ್ಕಾರಿ ಆದೇಶ ಸಂಖ್ಯೆ: 147 ಆರ್‌ಇಹೆಚ್ 2004 (ಭಾಗ–4) ದಿನಾಂಕ: 12–4–2006.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 10–1–2006ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ ಅಧಿನಿಯಮ 2005ರ (ಕರ್ನಾಟಕ ಅಧಿನಿಯಮ 13/2005) ಪ್ರಕರಣ 3(4) ರಡಿಯಲ್ಲಿ ಅವಕಾಶ ಕಲ್ಪಿಸಿದಂತೆ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯನ್ನು ರಚಿಸಲಾಗಿರುತ್ತದೆ.

ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 12–4–2006ರ ಸರ್ಕಾರಿ ಆದೇಶದಲ್ಲಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಗೆ 10 ಜನ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲಾಗಿರುತ್ತದೆ.

ರಾಜ್ಯದಲ್ಲಿ ವಿಧಾನಸಭೆಯು ವಿಸರ್ಜನೆಗೊಂಡು ರಾಷ್ಟ್ರಪತಿಗಳ ಆಡಳಿತ ಜಾರಿಗೆ ಬಂದ ನಂತರ ಈ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನವನ್ನು ರದ್ದುಗೊಳಿಸಲಾಗಿರುತ್ತದೆ. ಹೀಗಾಗಿ ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯಲ್ಲಿ ಹಾಲಿ ಖಾಲಿಯಿರುವ ಅಧಿಕಾರೇತರ ಸದಸ್ಯರ ಸ್ಥಾನಗಳಿಗೆ ಸರ್ಕಾರದಿಂದ ನಾಮ ನಿದೇಶನ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 162 ಆರ್‌ಇಹೆಚ್ 2008 ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಸರ್ಕಾರವು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ ಅಧಿನಿಯಮ 2005ರ (ಕರ್ನಾಟಕ ಅಧಿನಿಯಮ 13/2005) ಪ್ರಕರಣ 3(ಜಿ) ಮತ್ತು 3(ಆರ್) ರನ್ವಯ ಈ ಕೆಳಕಂಡವರನ್ನು ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿಯ ಸದಸ್ಯರುಗಳನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿದೇಶನ ಮಾಡಿ ಆದೇಶಿಸಿದೆ.

I **ಪ್ರಕರಣ 3(ಜಿ)**

| | | |
|---|---|---|
| 1 | ಪೂಜ್ಯ ಶ್ರೀ ಶಿವಮೂರ್ತಿ, ಮುರುಗರಾಜೇಂದ್ರ ಶರಣರು, ಬ್ರಹನ್ಮಠ, ಚಿತ್ರದುರ್ಗ | ಸದಸ್ಯರು |
| 2 | ಪೂಜ್ಯ ಶ್ರೀ ಬಸವಲಿಂಗ ಪಟ್ಟದೇವರು, ಹಿರೇಮಠ ಸಂಸ್ಥಾನ, ಭಾಲ್ಕಿ ಬೀದರ್ ಜಿಲ್ಲೆ. | ಸದಸ್ಯರು |
| 3 | ಪೂಜ್ಯ ಶ್ರೀ ಶ್ರೀ ಶ್ರೀ ಚನ್ನವೀರ ಶಿವಾಚಾರ್ಯರು, ಹಿರೇಮಠ ಸಂಸ್ಥಾನ ಹಾರಕೂಡ, ಬಸವಕಲ್ಯಾಣ ತಾಲ್ಲೂಕು. | ಸದಸ್ಯರು |
| 4 | ಶ್ರೀ ಗುರುನಾಥ್ ಲಾತುರೆ, ಅಧ್ಯಕ್ಷರು, ಬಸವೇಶ್ವರ ದೇವಸ್ಥಾನ, ಪಂಚ ಕಮಿಟಿ, ಬಸವಕಲ್ಯಾಣ. | ಸದಸ್ಯರು |
| 5 | ಶ್ರೀ ಬಸವರಾಜ್ ಗದವಾಲ್, ನಿವೃತ್ತ ಮುಖ್ಯ ಇಂಜಿನಿಯರ್, ಗುಲ್ಬರ್ಗಾ. ಬಸವಕಲ್ಯಾಣ. | ಸದಸ್ಯರು |

II ಪ್ರಕರಣ 3(ಆರ್)

| | | |
|---|---|---|
| 1 | ಪೂಜ್ಯ ಶ್ರೀ ಸಿದ್ದರಾಮ ಶರಣರು,<br>ಬೆಲ್ದಾಳ್, ಬೀದರ್ ಜಿಲ್ಲೆ. | ಸದಸ್ಯರು |
| 2 | ಡಾ. ನೀಲಾಂಬಿಕಾ<br>ಕೋಂ.ಎ.ಜಿ. ಪೊಲೀಸ್ ಪಾಟೀಲ್, ಗುರು ಶರಣ<br>ನಿಲಯ, ಪ್ಲಾಟ್ ನಂ. 310/1,<br>ಗೋದುತಾಯಿನಗರ, ಗುಲ್ಬರ್ಗಾ. | ಸದಸ್ಯರು |
| 3 | ಡಾ. ಎಂ.ಎಸ್. ಕಲಬುರ್ಗಿ, ನಿವೃತ್ತ ಉಪ<br>ಕುಲಪತಿಗಳು ಹಂಪಿ ವಿಶ್ವವಿದ್ಯಾಲಯ, ಸೌಜನ್ಯ<br>ಕಲ್ಯಾಣ ನಗರ, 9ನೇ ಕ್ರಾಸ್, ಧಾರವಾಡ. | ಸದಸ್ಯರು |
| 4 | ಶ್ರೀ ವೈಜಿನಾಥ್ ವಿಶ್ವನಾಥಪ್ಪ ಕಾಮಶೆಟ್ಟಿ, ಕಾರ್ಯದರ್ಶಿ<br>ಅನುಭವ ಮಂಟಪ, ಬಸವನಗರ, ಬಸವಕಲ್ಯಾಣ. | ಸದಸ್ಯರು |
| 5 | ಶ್ರೀ ವಿ. ಸಿದ್ಧರಾಮಣ್ಣ, ಶರಣರು,<br>ಅನುಭವ ಮಂಟಪ, ಬಸವಕಲ್ಯಾಣ. | ಸದಸ್ಯರು |

ಬಸವ ಕಲ್ಯಾಣ ಅಭಿವೃದ್ಧಿ ಮಂಡಳಿ ಅಧಿನಿಯಮದ ಪ್ರಕರಣ 4 ರಲ್ಲಿ ನಿರ್ದಿಷ್ಟ ಪಡಿಸಿದಂತೆ ಸರ್ಕಾರದ ಇಚ್ಛೆಗೆ ಒಳಪಟ್ಟು ಮೇಲೆ ನಾಮ ನಿರ್ದೇಶಿತರಾಗಿರುವ ಅಧಿಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡುವರು. ನಾಮನಿರ್ದೇಶಿತ ಸದಸ್ಯರು ನಿಯಮಾನುಸಾರ ಲಭ್ಯವಾಗುವ ಭತ್ಯೆಗಳನ್ನು ಪಡೆಯುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟೇಶಮೂರ್ತಿ**

ಪಿ.ಆರ್. 2706 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಸ್ವಾ-2 ಮತ್ತು ಪುನರ್ವಸತಿ)

**ಸಂಖ್ಯೆ: 299 ಬಿಎಸ್‌ಸಿ 2006, ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

**ವಿಷಯ :** ಗ್ರಾಮಲೆಕ್ಕಿಗರ ನೇರ ನೇಮಕಾತಿ ಸಂಬಂಧ ಮಾರ್ಗಸೂಚಿಗಳು

**ಉಲ್ಲೇಖ:** ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 34 ಪ್ರಕಾ 2009, ದಿನಾಂಕ: 26-9-2009.

ಮೇಲ್ಕಂಡ ವಿಷಯಕ್ಕೆ ಸಂಬಧಿಸಿದಂತೆ ಉಲ್ಲೇಖಿತ ಸುತ್ತೋಲೆಗಳಲ್ಲಿನ ಮಾರ್ಗಸೂಚಿಗಳ ಜೊತೆಗೆ ಮುಂದುವರೆದಂತೆ ಈ ಕೆಳಕಂಡ ಅಂಶಗಳನ್ನು ಅಳವಡಿಸಿಕೊಳ್ಳುವಂತೆ ಕೋರಲಾಗಿದೆ.

1. ಶುಲ್ಕವನ್ನು ಪಾವತಿಸಿದ ಅಥವಾ ಪಾವತಿಸದ ಅಭ್ಯರ್ಥಿಗಳ ಪಟ್ಟಿ ಮಾಡಿ ಕ್ರಮ ವಹಿಸುವುದನ್ನು ಜಿಲ್ಲಾಡಳಿತವೇ ತೀರ್ಮಾನಿಸಬೇಕಾಗಿದೆ. ತಾವೇನಾದರೂ, ಶುಲ್ಕ ಪಾವತಿಸಿದ ಅಭ್ಯರ್ಥಿಗಳ ಬಗ್ಗೆ ಮಾತ್ರ ಕ್ರಮ ವಹಿಸುವುದಾದರೆ, ಲೆಕ್ಕ ಹೊಂದಾಣಿಕೆಯು ದಿನಾಂಕ: 17-11-2009ರ ಒಳಗೆ ಪೂರ್ಣಗೊಳ್ಳಬೇಕು. ಒಂದು ವೇಳೆ ಜಿಲ್ಲಾಡಳಿತವು ಹಣ ಪಾವತಿಸಿದ ಹಾಗೂ ಪಾವತಿಸದ ಎಲ್ಲಾ ಅಭ್ಯರ್ಥಿಗಳಿಗೂ ಕ್ರಮ ವಹಿಸುವುದಾದರೆ, ಒಂದೇ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು, ಸಲ್ಲಿಸಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸುವುದು. ಕಾರಣ ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದು, ಒಂದೇ ಅರ್ಜಿಗೆ ಶುಲ್ಕ ಪಾವತಿಸಿರುತ್ತಾರೆ.
2. ಖುದ್ದಾಗಿ ಸ್ವೀಕರಿಸಿದ ಅರ್ಜಿಗಳ ಪರಿಶೀಲನೆ ಕಾರ್ಯವನ್ನು ದಿ: 17-11-2009ರೊಳಗೆ ಪೂರ್ಣಗೊಳಿಸಬೇಕು.
3. ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಿದ ನಂತರ ಆಕ್ಷೇಪಣೆ/ ತಕರಾರುಗಳನ್ನು ದಿನಾಂಕ: 30-11-2009 ರಿಂದ ದಿನಾಂಕ: 14-12-2009ರವರೆಗೆ ಆಹ್ವಾನಿಸುವುದು/ಸ್ವೀಕರಿಸುವುದು.

**ಎಂ.ಎಸ್. ದೇಸಾಯಿ**

ಪಿ.ಆರ್. 2707 ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ (ಸೇವೆಗಳು ಮತ್ತು ವಿ.ನಿ)

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು ಶಿವಮೊಗ್ಗ ರವರ ಪತ್ರ ಸಂಖ್ಯೆ ಎಂ.ಎ.ಜಿ(3) ಸಿಆರ್. 6/09–10 ದಿನಾಂಕ:24.08.2009.

2) ಮುಖ್ಯ ಆಡಳಿತಾಧಿಕಾರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಯ, ಶಿವಮೊಗ್ಗ ಇವರ ಪತ್ರ ನಂ. ಆಡಳಿತ ಜಿಸನ್ಯಾ 9448/2009 ದಿನಾಂಕ: 13.8.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 24–08–2009 ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ತೀರ್ಥಹಳ್ಳಿಯ ಮುನ್ಸೀಫ್ ನ್ಯಾಯಾಲಯವನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ನ್ಯಾಯಾಲಯವನ್ನಾಗಿ ಮತ್ತು ಸಿವಿಲ್ ಜಡ್ಜ್ ಕಿರಿಯ ನ್ಯಾಯಾಲಯವನ್ನು ಮೇಲ್ದರ್ಜೆಗೇರಿಸಿ ಸಿವಿಲ್ ಜಡ್ಜ್ ಹಿರಿಯ ವಿಭಾಗವನ್ನಾಗಿ ಮಾಡಲಾಗಿರುವುದರಿಂದ ಕೆಲಸಕಾರ್ಯಗಳು ಸುಗಮವಾಗಿ ನಡೆಯುವ ಉದ್ದೇಶದಿಂದ ನೋಟರಿ ಹುದ್ದೆ ಸೃಜಿಸುವಂತೆ ಅಧ್ಯಕ್ಷರು ಜಿಲ್ಲಾ ಪಂಚಾಯತ್ ಹಾಗೂ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿರವರು, ಕೋರಿದಂತೆ, ಆ ಬಗ್ಗೆ ಜಿಲ್ಲಾ ಮತ್ತು ಸತ್ರ ನ್ಯಾಯಾದೀಶರ ಕಛೇರಿಯಿಂದ ಅಭಿಪ್ರಾಯ ಪಡೆಯಲಾಗಿದ್ದು, ಮೇಲೆ (2)ರಲ್ಲಿ ಓದಲಾದ ದಿನಾಂಕ:13.08.2009ರ ಪತ್ರದಲ್ಲಿ ಮುಖ್ಯ ಆಡಳಿತಾಧಿಕಾರಿಗಳು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕಛೇರಿ ಶಿವಮೊಗ್ಗ ಇವರು ತೀರ್ಥಹಳ್ಳಿ ತಾಲ್ಲೂಕಿಗೆ ಇನ್ನೊಂದು ನೋಟರಿ ಹುದ್ದೆ ಸೃಜಿಸಬಹುದೆಂದು ಅಭಿಪ್ರಾಯ ನೀಡಿರುವುದಾಗಿ ತಿಳಿಸಿ ತೀರ್ಥಹಳ್ಳಿ ಕಂದಾಯ ತಾಲ್ಲೂಕಿಗೆ ನೋಟರಿ ಹುದ್ದೆ ಸೃಜಿಸುಲು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ.ಲಾ 121 ಎಲ್‌ಸಿಎಲ್ 2009 ಬೆಂಗಳೂರು, ದಿನಾಂಕ: 16ನೇ ನವೆಂಬರ್ 2009**

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಪಿ.ಆರ್. 2711

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಸುತ್ತೋಲೆ**

**ಸಂಖ್ಯೆ: ಲಾ 138 ಎಲ್‌ಎಜಿ 2009, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2009**

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ, ಹೊಳೆನರಸೀಪುರ ಮತ್ತು ಅರಕಲಗೂಡು ತಾಲ್ಲೂಕುಗಳಲ್ಲಿ ಹೊಸದಾಗಿ ಸ್ಥಾಪಿತವಾಗಿರುವ ಶೀಘ್ರ ವಿಲೇವಾರಿ ನ್ಯಾಯಲಯಗಳಿಗೆ ವರ್ಗಾಯಿಸಲಾದ ಸಂಬಂಧಪಟ್ಟ ಸಿವಿಲ್ ಪ್ರಕರಣಗಳಲ್ಲಿ ಸರ್ಕಾರದ ಪರವಾಗಿ ಪ್ರತಿನಿಧಿಸುವಂತೆ ಸದರಿ ಸ್ಥಳಗಳಲ್ಲಿರುವ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಪರ ಸರ್ಕಾರಿ ವಕೀಲರುಗಳಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಇ. ಶಿವಾನಂದ**

ಪಿ.ಆರ್. 2712

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–1)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ 32 ರಾಅವಿ 2004 ದಿನಾಂಕ: 20–03–2007.

2) ಸರ್ಕಾರದ ಆದೇಶ ಸಂಖ್ಯೆ 32 ರಾಅವಿ 2004 ದಿನಾಂಕ: 07–05–2007

3) ಸರ್ಕಾರದ ಪತ್ರ ಸಂಖ್ಯೆ ಮೂಅಇ 32 ರಾಅವಿ 2008 ದಿನಾಂಕ: 20–12–2008
4) ಸರ್ಕಾರದ ಆದೇಶ ಸಂಖ್ಯೆ 23 ರಾಅವಿ 2008 ದಿನಾಂಕ: 23–05–2009.
5) ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರ ದಿನಾಂಕ: 31–10–2009ರ ಪತ್ರ ಸಂಖ್ಯೆ: DC/PA/CR-36/2009-10.

**ಪ್ರಸ್ತಾವನೆ:**

ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ (AAI) ತಯಾರಿಸಿ ಅನುಷ್ಠಾನಗೊಳಿಸಲು ನಿರ್ಧರಿಸಿರುವ ಧೀರ್ಘಾವಧಿ ಕ್ರಿಯಾ ಯೋಜನೆ ಪ್ರಕಾರ 650 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿಪಡಿಸಲು ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಸದರಿ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ. 20.00 ಕೋಟಿಗಳನ್ನು ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

3. ಮುಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಹಾಗೂ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಏರ್ಪಟ್ಟ ಸಭೆಯ ನಿರ್ಧಾರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣಕ್ಕೆ ಅಗತ್ಯವಾದ ಭೂಸ್ವಾಧೀನ ವೆಚ್ಚದ ಅರ್ಧ ಪಾಲನ್ನು ಕೆಐಎಡಿಬಿ ಯಿಂದ ಭರಿಸುವಂತೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿ, ಭೂ ನಿವಾಸಿಗಳ ಮಾಲೀಕರಿಗೆ ಪರಿಹಾರ ಪಾವತಿಗಾಗಿ ರೂ. 3.31 ಕೋಟಿಗಳನ್ನು ಧಾರವಾಡ ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡುವಂತೆ ಹಾಗೂ ಇದಕ್ಕೆ ಬದಲಾಗಿ ಕೆಐಎಡಿಬಿ 60 ಎಕರೆ ಭೂ ಪ್ರದೇಶವನ್ನು ಇವರ ವಾಣಿಜ್ಯಾತ್ಮಕ ಅಭಿವೃದ್ಧಿಗಾಗಿ ನೀಡುವುದಾಗಿ ತಿಳಿಸಲಾಗಿದ್ದಿತು.

4. ಮೇಲೆ ಕ್ರ.ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 23–05–2009ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಯ ವ್ಯಾಪ್ತಿಯಲ್ಲಿ ಬರುವ ಕೈಗಾರಿಕಾ ಪ್ರದೇಶದ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಈಗ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಕ್ರಮ ಸಂಖ್ಯೆ: (5)ರಲ್ಲಿ ಓದಲಾದ ಪತ್ರದಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಉನ್ನತೀಕರಣಕ್ಕಾಗಿ ಆಗತ್ಯವಾದ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಈಗಾಗಲೇ ದಿನಾಂಕ: 2–09–2008 ರಂದು ಅಧಿಸೂಚನೆ ಹೊರಡಿಸಲಾಗಿದೆ. ಎಂದು ಈ ಬಗ್ಗೆ ಸಂಬಂಧಪಟ್ಟ ಭೂ ಮಾಲೀಕರೊಂದಿಗೆ ಧೀರ್ಘ ಚರ್ಚೆ ನಡೆಸಿ ಸುಮಾರು 448 ಎಕರೆ ಶೇತ್ಕಿ ಭೂಮಿಯ ಬೆಲೆಯನ್ನು ಪ್ರತಿ ಎಕರೆಗೆ ರೂ. 26.00 ಲಕ್ಷಗಳಂತೆ ನಿಗಧಿ ಮಾಡಿದ್ದು, ಇದಕ್ಕಾಗಿ ರೂ. 120.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

6. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 23 ರಾಅವಿ 2008, ಬೆಂಗಳೂರು, ದಿನಾಂಕ: 27ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅಗತ್ಯವಾದ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ರೂ. 25.00 ಕೋಟಿಗಳನ್ನು (ರೂ. ಇಪ್ಪತ್ತೈದು ಕೋಟಿಗಳು) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05–211 ರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಿಸಿರುವ ಮೊತ್ತ ರೂ. 100.00 ಕೋಟಿಗಳಿಂದ ಭರಿಸತಕ್ಕದ್ದು.

3) ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ ಧಾರವಾಡ ಇವರು ಪೇಯೀಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯುವುದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1806 ವೆಚ್ಚ–I /09 ದಿನಾಂಕ: 27–11–2009ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಮಂಜುಳ ಗೀತ**

ಪಿ.ಆರ್. 2713

ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** 2009–10ನೇ ಸಾಲಿಗೆ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಲೆಕ್ಕಶೀರ್ಷಿಕೆ 3451–00–090–2–21 (ಯೋಜನೇತರ) ಇದರಡಿಯಲ್ಲಿನ ಉಪಶೀರ್ಷಿಕೆ 071ಕ್ಕೆ ರೂ. 8.60 ಲಕ್ಷಗಳ ಮರುಹೊಂದಾಣಿಕೆ ಕುರಿತಂತೆ ಆದೇಶ.

**ಓದಲಾಗಿದೆ:** ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಮತಂಜೈತಂನಿ/ಲೆಕ್ಕ–1/ಯುಎನ್ಐ ಬಾಡಿಗೆ 10/462/ 2006–07, ದಿ: 16–09–2009.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ದಿನಾಂಕ: 16–09–2009ರ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರ ಪತ್ರದಲ್ಲಿ ನಿರ್ದೇಶಕರು 2009–10ನೇ ಸಾಲಿನ ನಿರ್ದೇಶನಾಲಯದ ಲೆಕ್ಕಶೀರ್ಷಿಕೆ "3451–00–090–2–21(ಯೋಜನೇತರ)" ಇದರಡಿಯ ಉಪಶೀರ್ಷಿಕೆ 071 ಕಟ್ಟಡಗಳ ಖರ್ಚುಗಳ ಅಡಿಯಲ್ಲಿ ಬಾಡಿಗೆ ನೀರಿನ ವೆಚ್ಚ ಮತ್ತು ವಿದ್ಯುತ್ ಶುಲ್ಕವನ್ನು ಪಾವತಿಸಲು ರೂ. 3.12 ಲಕ್ಷ ಅನುದಾನವನ್ನು ಒದಗಿಸಿದ್ದು, ಈವರೆಗೆ ರೂ. 2,91,943.00 ಖರ್ಚಾಗಿದ್ದು, ಸದರಿ ಉಪಶೀರ್ಷಿಕೆಯಡಿಯಲ್ಲಿ ದಿನಾಂಕ: 31–03–2010ರವರೆಗೆ, ಯು.ಎನ್.ಐ ಕಟ್ಟಡದ ಬಾಡಿಗೆ ನೀರು ಸಾಮಾನ್ಯ ಸೌಕರ್ಯಗಳ ಮತ್ತು ನಿರ್ದೇಶನಾಲಯದ ವಿದ್ಯುತ್ ಬಳಕೆ ವೆಚ್ಚದ ಬಿಲ್ಲುಗಳಿಗೆ ಹಣ ಪಾವತಿಸಲು ಒಟ್ಟು ರೂ. 8,60,000/–ಗಳ ಅವಶ್ಯಕತೆ ಇರುವುದಾಗಿ ತಿಳಿಸಿರುತ್ತಾರೆ.

ಮುಂದುವರೆದು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಉಪಶೀರ್ಷಿಕೆಗಳಾದ "3451–00–090–2–21(ಯೋಜನೇತರ)" ಇದರಡಿಯಲ್ಲಿನ ಉಪಶೀರ್ಷಿಕೆಗಳಾದ 051 ಸಾಮಾನ್ಯ ವೆಚ್ಚ (General Expenses) ಇದರಡಿಯಲ್ಲಿ ರೂ. 1.84 ಲಕ್ಷಗಳ ಅನುದಾನ ಒದಗಿಸಿದ್ದು, ರೂ. 1.50 ಲಕ್ಷ ಉಳಿತಾಯ, 052 ದೂರವಾಣಿ ಖರ್ಚುಗಳ ಅಡಿಯಲ್ಲಿ ರೂ. 2.57 ಲಕ್ಷ ಅನುದಾನದಲ್ಲಿ ರೂ. 1.40ಲಕ್ಷ ಉಳಿತಾಯ 195 ಸಾರಿಗೆ ವೆಚ್ಚ ಅಡಿಯಲ್ಲಿ ರೂ. 4,64 ಲಕ್ಷ ಅನುದಾನದಲ್ಲಿ ರೂ. 1.00 ಲಕ್ಷ ಉಳಿತಾಯ 200–ನಿರ್ವಹಣೆ ಶೀರ್ಷಿಕೆಯಡಿಯಲ್ಲಿ ರೂ. 3.56 ಲಕ್ಷ ಅನುದಾನದಲ್ಲಿ ರೂ. 2.70 ಲಕ್ಷ ಉಳಿತಾಯ ಹಾಗೂ 221–ಸಾಮಗ್ರಿ ಮತ್ತು ಸರಬರಾಜು ಅಡಿಯಲ್ಲಿ ರೂ. 2.97 ಲಕ್ಷ ಅನುದಾನದಲ್ಲಿ ರೂ. 2.00 ಲಕ್ಷ ಉಳಿತಾಯ ಮತ್ತು ಹೀಗೆ ಒಟ್ಟು ಉಳಿಯಬಹುದಾದ ರೂ. 8.60 ಲಕ್ಷಗಳನ್ನು 071–ಕಟ್ಟಡ ವೆಚ್ಚಗಳ ಉಪಶೀರ್ಷಿಕೆಯಡಿಗೆ ಪುನರ್ವಿನಿಯೋಗ ಮಾಡಿಕೊಳ್ಳಲು ಪ್ರಸ್ತಾವಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಮಾತಂಇ 68 ಅಡವಿ 2009 ಬೆಂಗಳೂರು, ದಿನಾಂಕ: 25ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ಲೆಕ್ಕಶೀಷಿಕೆ "3451–00–090–2–21(ಯೋಜನೇತರ) ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ" ಇದರಡಿಯಲ್ಲಿನ ಉಪಶಿರ್ಷಿಕೆಗಳಾದ 051 ಸಾಮಾನ್ಯ ವೆಚ್ಚ (General Expenses) ಇದರಡಿಯಲ್ಲಿ ರೂ. 1.50 ಲಕ್ಷಗಳ 052 ದೂರವಾಣಿ ಖರ್ಚುಗಳ ಅಡಿಯಲ್ಲಿ ರೂ. 1.40 ಲಕ್ಷ, 195 ಸಾರಿಗೆ ವೆಚ್ಚದಡಿಯಲ್ಲಿ ರೂ. 1.00 ಲಕ್ಷ 200–ನಿರ್ವಹಣೆ ಶೀರ್ಷಿಕೆಯಡಿಯಲ್ಲಿ ರೂ. 2.70 ಲಕ್ಷ 221–ಸಾಮಗ್ರಿ ಮತ್ತು ಸರಬರಾಜು ಅಡಿಯಲ್ಲಿ ರೂ. 2.00 ಲಕ್ಷ ಹೀಗೆ ಒಟ್ಟು ರೂ. 8.60 ಲಕ್ಷಗಳ ಉಳಿತಾಯವನ್ನು ಅದೇ ಲೆಕ್ಕಶೀರ್ಷಿಕೆಯಲ್ಲಿನ ಉಪಶೀರ್ಷಿಕೆ 071 – ಕಟ್ಟಡ ವೆಚ್ಚಗಳು ಇಲ್ಲಿಗೆ ಮರುಹೊಂದಾಣಿಕೆ ಮೂಲಕ ಭರಿಸಲು, ಮರುಹೊಂದಾಣಿಕೆ ಮಾಡಿಕೊಂಡ ಹಣವನ್ನು ಕಟ್ಟಡ ಬಾಡಿಗೆ, ನೀರು ಹಾಗೂ ವಿದ್ಯುಚ್ಛಕ್ತಿ ಹಣ ಪಾವತಿಗೆ ಮಾತ್ರ ಉಪಯೋಗಿಸುವ ಷರತ್ತಿನೊಂದಿಗೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಅಇ 328 ವೆಚ್ಚ–2 2009, ದಿನಾಂಕ: 13–11–2009ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯ ಮೇರೆಗೆ ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**K.F.C. FORM 22-A (ART-108)**

**APPROPRIATION STATEMENTS TO ACCOMPANY ALL APPLICATIONS OR SANCTION TO EXPENDITURE NOT PROVIDED FOR IN THE BUDGET OR FOR ADDITIONAL ALLOTMENTS**

**(Rs. In Lakhs)**

| | Heads of estimate proposed to be increased | | | | Heads of estimate proposed to be reduced | | | | |
|---|---|---|---|---|---|---|---|---|---|
| Major, Minor, sub & Detailed Heads of Budget (The same details must be given as in the printed Budget Estimate) | Amount as in the Sanctioned Budget Estimates 2009-10 | Actual Expenditure up-to-date | Probable Expenditure during remainder of the year 2009-10 | Amount of Additional Allotment required 2009-10 | Amount as in the Sanctioned Budget Estimates 2009-10 | Actual Expenditure up-to-date | Probable Expenditure during remainder of the year 2009-10 | Amount of Additional Allotment required 2009-10 | Remarks (Here State fully the reasons for exceeding the allot. And for anticipating savings) |
| 3451-00-090-2-21 (NP) Directorate of IT and biotechnology | | | | | | | | | **ಕೊರತೆಗೆ ಕಾರಣ**<br>ಯು.ಎನ್.ಐ. ಕಟ್ಟಡದ ಬಾಡಿಗೆ ದರದಲ್ಲಿ ಹೆಚ್ಚಳ ಉಂಟಾಗಿರುವುದರಿಂದ ಅನುದಾನದ ಕೊರತೆಯಾಗಿರುತ್ತದೆ.<br>**ಉಳಿತಾಯಕ್ಕೆ ಕಾರಣಗಳು:**<br>ದೂರವಾಣಿ, ಸಾರಿಗೆ ಮತ್ತಿತರ ವೆಚ್ಚಗಳಲ್ಲಿ ಮಿತವ್ಯಯವನ್ನು ಸಾಧಿಸಲಾಗಿರುತ್ತದೆ. ಆದುದರಿಂದ, ಉಳಿತಾಯ ಕಂಡು ಬಂದಿದೆ. |
| 071-Building Expenses | 3.12 | 2.91 | 8.60 | 8.60 | -- | -- | -- | -- | |
| 051- General Expenses | -- | -- | -- | -- | 1.84 | 0.55 | 0.285 | 1.50 | |
| 052- Telephone Charges | -- | -- | -- | -- | 2.57 | 0.17 | 1.00 | 1.40 | |
| 195- Transport Expenses | -- | -- | -- | -- | 4,64 | 1.37 | 2.27 | 1.00 | |
| 200-Maintenance | -- | -- | -- | -- | 3.56 | 0.06 | 0.80 | 2.70 | |
| 221- Materials & Supplies | -- | -- | -- | -- | 2.97 | 0.50 | 0.47 | 2.00 | |
| TOTAL | 3.12 | 2.91 | 8.60 | 8.60 | -- | -- | -- | 8.60 | |

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2714

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು ಕಡೂರು ವಿಧಾನ ಸಭಾ ಕ್ಷೇತ್ರದ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನು ಕೆಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ:** ಶ್ರೀ ಕೆ.ಎಂ. ಕೃಷ್ಣಮೂರ್ತಿ ಮಾನ್ಯ ಕಡೂರು ವಿಧಾನ ಸಭಾ ಕ್ಷೇತ್ರದ ಶಾಸಕರು, ಇವರ ಪತ್ರದ ದಿನಾಂಕ:30–09–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಕೆ.ಎಂ.ಕೃಷ್ಣಮೂರ್ತಿ ಮಾನ್ಯ ಕಡೂರು ವಿಧಾನ ಸಭಾ ಕ್ಷೇತ್ರದ ಶಾಸಕರು, ಚಿಕ್ಕಮಗಳೂರು ಜಿಲ್ಲೆಯ, ಕಡೂರು ವಿಧಾನ ಸಭಾ ಕ್ಷೇತ್ರದ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳನ್ನು ಕೆಳದರ್ಜೆಗಿಳಿಸಿ ಗ್ರಾಮೀಣ ರಸ್ತೆಗಳನ್ನಾಗಿ ಮುಂದುವರಿಸಲು ಕೋರಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಮತಿಘಟ್ಟದಿಂದ ಚೀರನಹಳ್ಳಿ, ದೇವರಹಳ್ಳಿ ಬಂಜೇನಹಳ್ಳಿ, ಬಳ್ಳೇಕೆರೆ ಮರಡಿಹಳ್ಳಿ ಪಟ್ಟಣಗೆರೆ ರಸ್ತೆ | 18.00 |
| 2. | ಟಿ ಹೆಚ್ ರಸ್ತೆ 206ರಿಂದ ಮಲ್ಲಪ್ಪನಹಳ್ಳಿ ಕಣಕಟ್ಟ ರಸ್ತೆ ವಯಾ ಕೆರೆಸಂತೆ ಮಲ್ಲಘಟ್ಟ ಬಿ.ಎಂ ಕೊಪ್ಪಲು ಎಸ್. ರಂಗಾಪುರ, ಎಸ್ ಮಾದಾಪುರ ಬಿದರೆ ಮೂಲಕ ಪಂಚನಹಳ್ಳಿ ರಸ್ತೆಗೆ ಸೇರುವ ರಸ್ತೆ. | 25.00 |
| 3. | ಕಡೂರು ಮರವಂಜಿ ರಸ್ತೆಯಿಂದ ಮಚ್ಚೇರಿ ಬಿಳುವಾಲ ನಾಗಗೊಂಡನಹಳ್ಳಿ ಬಿಸಲಿರೆ, ಅರೆಹಳ್ಳಿ ಅಡಿಗೆರೆ, ಅಸಂದಿ ಬೇಗೂರು ಗೇಟ್ ಮೂಲಕ ಹೊಸದುರ್ಗ. | 30.00 |
| | **ಒಟ್ಟು :** | **73.00** |

ಮಾನ್ಯ ವಿಧಾನ ಸಭಾ ಸದಸ್ಯರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಲೋಇ 584 ಸಿಆರ್‌ಎಂ 2009 ಬೆಂಗಳೂರು, ದಿನಾಂಕ: 13ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕಡೂರು ವಿಧಾನ ಸಭಾ ಕ್ಷೇತ್ರದ ಈ ಕೆಳಕಂಡ 3 (ಮೂರು) ಜಿಲ್ಲಾ ಮುಖ್ಯ ರಸ್ತೆಗಳನ್ನು ನಿಯಮಾನುಸಾರ ಕೆಳದರ್ಜೆಗಿಳಿಸಿ (Denotify) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಮತಿಘಟ್ಟದಿಂದ ಚೀರನಹಳ್ಳಿ, ದೇವರಹಳ್ಳಿ ಬಂಜೇನಹಳ್ಳಿ, ಬಳ್ಳೇಕೆರೆ ಮರಡಿಹಳ್ಳಿ ಪಟ್ಟಣಗೆರೆ ರಸ್ತೆ | 18.00 |
| 2. | ಟಿ ಹೆಚ್ ರಸ್ತೆ 206ರಿಂದ ಮಲ್ಲಪ್ಪನಹಳ್ಳಿ ಕಣಕಟ್ಟ ರಸ್ತೆ ವಯಾ ಕೆರೆಸಂತೆ ಮಲ್ಲಘಟ್ಟ ಬಿ.ಎಂ ಕೊಪ್ಪಲು ಎಸ್. ರಂಗಾಪುರ, ಎಸ್ ಮಾದಾಪುರ ಬಿದರೆ ಮೂಲಕ ಪಂಚನಹಳ್ಳಿ ರಸ್ತೆಗೆ ಸೇರುವ ರಸ್ತೆ. | 25.00 |
| 3. | ಕಡೂರು ಮರವಂಜಿ ರಸ್ತೆಯಿಂದ ಮಚ್ಚೇರಿ ಬಿಳುವಾಲ ನಾಗಗೊಂಡನಹಳ್ಳಿ ಬಿಸಲಿರೆ, ಅರೆಹಳ್ಳಿ ಅಡಿಗೆರೆ, ಅಸಂದಿ ಬೇಗೂರು ಗೇಟ್ ಮೂಲಕ ಹೊಸದುರ್ಗ. | 30.00 |
| | **ಒಟ್ಟು:** | **73.00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಪಿ.ಆರ್. 2719

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

**ವಿಷಯ:** ಮೈಸೂರು ಜಿಲ್ಲೆಯ ವರುಣಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಲೋಕೋಪಯೋಗಿ ಇಲಾಖೆಯ ರಸ್ತೆಗಳನ್ನು ಕೆಳದರ್ಜೆಗೊಳಿಸುವ ಬಗ್ಗೆ.

**ಓದಲಾಗಿದೆ:** ಶ್ರೀ ಸಿದ್ಧರಾಮಯ್ಯ ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆ, ವಿಧಾನಸೌಧ, ಇವರ ಪತ್ರದ ದಿನಾಂಕ: 27–10–2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಸಿದ್ಧರಾಮಯ್ಯ ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆ, ವಿಧಾನಸೌಧ, ಇವರು ಮೈಸೂರು ಜಿಲ್ಲೆಯ, ವರುಣಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿ ಅನುದಾನದ ಕೊರತೆಯಿಂದ ಸಮಗ್ರವಾಗಿ ಅಭಿವೃದ್ಧಿಪಡಿಸಲು ಸಾಧ್ಯವಾಗದೇ ಇರುವುದರಿಂದ, ಈ ಕೆಳಕಂಡ ರಸ್ತೆಗಳನ್ನು ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಲು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗೆ ಹಸ್ತಾಂತರಿಸಲು ಕೋರಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ರಾಷ್ಟ್ರೀಯ ಹೆದ್ದಾರಿ 212 ರ ಸರಪಳಿ 230.40ರಿಂದ ಟಿ. ನರಸೀಪುರ ತಾಯೂರು – ಕುಪ್ಪೇಗಾಲ ಮಾರ್ಗವಾಗಿ ಸೇರುವ ರಸ್ತೆ (ಸರಪಳಿ 5.65 ಕಿ.ಮೀ.) | 5.65 |
| 2. | ಕುಪ್ಪೇಗಾಲದಿಂದ ವರುಣಾ ಹೊಸಕೋಟೆಗೆ ಸಿದ್ದರಾಮನಹುಂಡಿ ರಂಗನಾಥಪುರ ಕಡವಿನಕಟ್ಟೆಹುಂಡಿ ಮಾರ್ಗದ ರಸ್ತೆ. | 2.70 |
| 3. | ರಾಷ್ಟ್ರೀಯ ಹೆದ್ದಾರಿ 212 ರಿಂದ ವರಕೂಡು ಗ್ರಾಮಕ್ಕೆ ನಾಡನಹಳ್ಳಿ, ಭುಗತಗಳ್ಳಿ, ವಾಜಮಂಗಲ ಮಾರ್ಗವಾಗಿ ಸೇರುವ ರಸ್ತೆ. | 8.30 |
| 4. | ಬೆಂಗಳೂರು ನೀಲಗಿರಿ ರಸ್ತೆಯಿಂದ ಸೋಮೇಶ್ವರಪುರ ಗ್ರಾಮಕ್ಕೆ ಮರಸೆ, ಮಾಕನಹುಂಡಿ ದೇವಲಾಪುರ ಮಾರ್ಗವಾಗಿ ಸೇರುವ ರಸ್ತೆ ಉದ್ದ. | 7.50 |
| 5. | ಹೊಸಕೋಟೆಯಿಂದ ಕೊಮ್ಮೇಗೌಡನ ಕೊಪ್ಪಲಿಗೆ ಸೇರುವ ರಸ್ತೆ–ಉದ್ದ | 5.00 |
| 6. | ಟಿ. ನರಸೀಪುರ ತಾಲ್ಲೂಕು ಗರ್ಗೇಶ್ವರಿಯಿಂದ ರಂಗನಾಥಪುರವರೆಗೆ ರಸ್ತೆ ಸರಪಳಿ 0.00 ರಿಂದ 11.20 ಕಿಮೀವರೆಗೆ ಅಭಿವೃದ್ಧಿ. | 11.20 |
| | **ಒಟ್ಟು:** | **40.35** |

ಮಾನ್ಯ ವಿರೋಧ ಪಕ್ಷದ ನಾಯಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಲೋಇ 579 ಸಿಆರ್‌ಎಂ 2009 ಬೆಂಗಳೂರು, ದಿನಾಂಕ: 16ನೇ ನವೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆಯ ವರುಣಾ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ 6 (ಆರು) ಜಿಲ್ಲಾ ಮುಖ್ಯ ರಸ್ತೆಗಳನ್ನು ನಿಯಮಾನುಸಾರ ಕೆಳದರ್ಜೆಗಿಳಿಸಿ (Denotify) ಗ್ರಾಮೀಣಾಬಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ರಾಷ್ಟ್ರೀಯ ಹೆದ್ದಾರಿ 212 ರ ಸರಪಳಿ 230.40ರಿಂದ ಟಿ. ನರಸೀಪುರ ತಾಯೂರು – ಕುಪ್ಪೇಗಾಲ ಮಾರ್ಗವಾಗಿ ಸೇರುವ ರಸ್ತೆ (ಸರಪಳಿ 5.65 ಕಿ.ಮೀ.) | 5.65 |
| 2. | ಕುಪ್ಪೇಗಾಲದಿಂದ ವರುಣಾ ಹೊಸಕೋಟೆಗೆ ಸಿದ್ದರಾಮನಹುಂಡಿ ರಂಗನಾಥಪುರ ಕಡವಿನಕಟ್ಟೆಹುಂಡಿ ಮಾರ್ಗದ ರಸ್ತೆ. | 2.70 |
| 3. | ರಾಷ್ಟ್ರೀಯ ಹೆದ್ದಾರಿ 212 ರಿಂದ ವರಕೂಡು ಗ್ರಾಮಕ್ಕೆ ನಾಡನಹಳ್ಳಿ, ಭುಗತಗಳ್ಳಿ, ವಾಜಮಂಗಲ ಮಾರ್ಗವಾಗಿ ಸೇರುವ ರಸ್ತೆ. | 8.30 |
| 4. | ಬೆಂಗಳೂರು ನೀಲಗಿರಿ ರಸ್ತೆಯಿಂದ ಸೋಮೇಶ್ವರಪುರ ಗ್ರಾಮಕ್ಕೆ ಮರಸೆ, ಮಾಕನಹುಂಡಿ ದೇವಲಾಪುರ ಮಾರ್ಗವಾಗಿ ಸೇರುವ ರಸ್ತೆ ಉದ್ದ. | 7.50 |
| 5. | ಹೊಸಕೋಟೆಯಿಂದ ಕೊಮ್ಮೇಗೌಡನ ಕೊಪ್ಪಲಿಗೆ ಸೇರುವ ರಸ್ತೆ–ಉದ್ದ | 5.00 |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 6. | ಟಿ. ನರಸೀಪುರ ತಾಲ್ಲೂಕು ಗರ್ಗೇಶ್ವರಿಯಿಂದ ರಂಗನಾಥಪುರವರೆಗೆ ರಸ್ತೆ ಸರಪಳಿ 0.00 ರಿಂದ 11.20 ಕಿಮೀವರೆಗೆ ಅಭಿವೃದ್ಧಿ. | 11.20 |
| | **ಒಟ್ಟು:** | **40.35** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೇವಿಪ್ರಸಾದ್**

ಪಿ.ಆರ್. 2720

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ),

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ನೆರವಿನ ಎ.ಐ.ಬಿ.ಪಿ ಕಾರ್ಯಕ್ರಮವನ್ನು ಸಣ್ಣ ನೀರಾವರಿ ಇಲಾಖೆಯ ಮೂಲಕ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** ಡೈರೆಕ್ಟರ್ (ಮಾನಿಟರಿಂಗ್), ಸೆಂಟ್ರಲ್ ವಾಟರ್ ಕಮೀಷನ್, ಮಾನಿಟರಿಂಗ್ (ಸೌತ್) ಆರ್ಗನೈಜೇಷನ್, ಜಲಸೌಧ, ಬೆಂಗಳೂರು ರವರ ದಿ: 08/05/09ರ ಪತ್ರದ ಸಂಖ್ಯೆ: 73/1–ಎ/2009–ಮಾನಿ (ಎಸ್)/1344–47

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಸಣ್ಣ ನೀರಾವರಿ ಯೋಜನೆಗಳನ್ನು ಕೇಂದ್ರ ಸರ್ಕಾರದ ನೆರವಿನ ಎ.ಐ.ಬಿ.ಪಿ ಕಾರ್ಯಕ್ರಮದಡಿ ಅನುಷ್ಠಾನಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಭಾರತ ಸರ್ಕಾರವು ಮೇಲೆ ಓದಲಾದ ಪತ್ರದಲ್ಲಿ ತಿಳಿಸಿ, ಸದರಿ ಯೋಜನೆಯ ಮಾರ್ಗಸೂಚಿ/ ಮಾನದಂಡಗಳನ್ನು ಕಳುಹಿಸಿರುತ್ತದೆ.

ಭಾರತ ಸರ್ಕಾರವು ಈ ಯೋಜನೆಯ ಬಗ್ಗೆ ಹೊರಡಿಸಿರುವ ಪರಿಷ್ಕೃತ ಮಾರ್ಗಸೂಚಿ/ ಮಾನದಂಡಗಳು ಈ ಕೆಳಗಿನಂತಿವೆ.

1) ಕರ್ನಾಟಕ ರಾಜ್ಯವು ವಿಶೇಷ ವಲ್ಲದ ಪ್ರವರ್ಗ ಪಟ್ಟಿಯಲ್ಲಿ ಸೇರಿದೆ,
2) ಗಿರಿಜನ ಪ್ರದೇಶ ಮತ್ತು ಬರಪೀಡಿತ ಪ್ರದೇಶಗಳಲ್ಲಿ 50 ಹೆಕ್ಟೇರ್‌ಗಿಂತ ಹೆಚ್ಚಾಗಿರುವ ಸಣ್ಣ ನೀರಾವರಿ ಕಾರ್ಯಕ್ರಮಗಳು ಎ.ಐ.ಬಿ.ಪಿ. ಯೋಜನೆಯಡಿ ಒಳಗೊಂಡಿದೆ.
3) ಯೋಜನಾ ಆಯೋಗದ ಸಹಮತಿಯೊಂದಿಗೆ ಈ ಯೋಜನೆಗಳನ್ನು ಕೈಗೊಳ್ಳಲಾಗುವುದು.
4) ಬರಪೀಡಿತ ಪ್ರದೇಶಗಳಿಗೆ ಸಂಬಂಧಿಸಿದಂತೆ ಯೋಜನಾ ವೆಚ್ಚದ ಶೇ. 90ರಷ್ಟು ಕೇಂದ್ರ ಸರ್ಕಾರವು ಭರಿಸುತ್ತಿದ್ದು, ಉಳಿದ ಮೊತ್ತವನ್ನು ರಾಜ್ಯ ಸರ್ಕಾರವು ಭರಿಸಬೇಕಾಗುತ್ತದೆ.
5) ಈ ಕಾರ್ಯಕ್ರಮದಡಿ ಅನುಮೋದನೆಗೊಳ್ಳುವ ಸಣ್ಣ ನೀರಾವರಿ ಯೋಜನೆಗಳನ್ನು ಎರಡು ವರ್ಷಗಳೊಳಗೆ ಪೂರ್ಣಗೊಳಿಸಬೇಕು.

ರಾಜ್ಯ ಸರ್ಕಾರವು 2009–10ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ಲೆಕ್ಕಶೀರ್ಷಿಕೆ "4702–00–101–1–10 (ಯೋಜನೆ)–ಎ.ಐ.ಬಿ.ಪಿ" ಅಡಿ ರೂ. 70.00 ಕೋಟಿಗಳ ಅನುದಾನವನ್ನು ಒದಗಿಸಿದೆ. ಆದ್ದರಿಂದ ಪ್ರಥಮವಾಗಿ ಬರಪೀಡಿತ ಪ್ರದೇಶಾಭಿವೃದ್ಧಿ ಕಾರ್ಯಕ್ರಮದಡಿ ಗುರುತಿಸಿರುವ ತಾಲ್ಲೂಕುಗಳಲ್ಲಿ (ಡಿ.ಪಿ.ಎ.ಪಿ) ಮತ್ತು ಮರುಭೂಮಿ ಪ್ರದೇಶಾಭಿವೃದ್ಧಿ ಕಾರ್ಯಕ್ರಮದಡಿ ಗುರುತಿಸಿರುವ (ಡಿ.ಡಿ.ಪಿ) ತಾಲ್ಲೂಕುಗಳಲ್ಲಿ ಬರುವ ಸಣ್ಣ ನೀರಾವರಿ ಇಲಾಖೆಯ ಪ್ರಗತಿಯಲ್ಲಿರುವ ಯೋಜನೆಗಳನ್ನು ಗುರುತಿಸಿ ಎ.ಐಬಿ.ಪಿ ಕಾರ್ಯಕ್ರಮದಡಿಯಲ್ಲಿ ಕೈಗೊಳ್ಳಲು ನಿರ್ಧರಿಸಲಾಗಿದೆ.

ಈ ಯೋಜನೆಯನ್ನು ಸಣ್ಣ ನೀರಾವರಿ ಇಲಾಖೆಯ ಮೂಲಕ ಅನುಷ್ಠಾನಗೊಳಿಸಲು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 32 ಕೆಜಿದು 2009, ಬೆಂಗಳೂರು, ದಿನಾಂಕ: 26ನೇ ಅಕ್ಟೋಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳಂತೆ ಎ.ಐ.ಬಿ.ಪಿ ಕಾರ್ಯಕ್ರಮವನ್ನು 2009–10ನೇ ಸಾಲಿನಿಂದ ಸಣ್ಣ ನೀರಾವರಿ ಇಲಾಖೆ ಮೂಲಕ ಅನುಷ್ಠಾನಗೊಳಿಸಲು ಅನುಮೋದಿಸಿದೆ.

ಮುಂದುವರೆದ 2009–10ನೇ ಸಾಲಿನ ಆಯವ್ಯಯದಲ್ಲಿ ಲೆಕಶೀರ್ಷಿಕೆ "4702–00–101–1–10 (ಯೋಜನೆ)–ಎ.ಐ.ಬಿ.ಪಿ" ಅಡಿ ಒದಗಿಸಿರುವ ರೂ. 70.00 ಕೋಟಿಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದ ಪಾಲಾಗಿ 90:10ರ ಅನುಪಾತದಲ್ಲಿ ಬಳಸಿಕೊಳ್ಳುವುದು.

ಈ ಆದೇಶವನ್ನು ಯೋಜನಾ ಇಲಾಖೆಯು ದಿನಾಂಕ: 3.8.2009ರ ಟಿಪ್ಪಣಿ ಸಂಖ್ಯೆ: ಪಿಡಿ 16 ಎಂಸಿಎಂ 2009ರಲ್ಲಿ ನೀಡಿರುವ ಸಹಮತಿ ಮತ್ತು ಆರ್ಥಿಕ ಇಲಾಖೆಯ ದಿನಾಂಕ: 18.08.009ರ ಟಿಪ್ಪಣಿ ಸಂಖ್ಯೆ: ಲೋಇ 647 ಎಫ್‌ಸಿ–1/2009 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2481

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಬಳ್ಳಿಬೈಲು ಗ್ರಾಮದ ಬಳಿ ನಂದಿಹೊಳೆಗೆ ಅಡ್ಡಲಾಗಿ ಬ್ಯಾರೆಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ನಯೋಕಾ 2007 ದಿನಾಂಕ: 29.01.2009.

2. ದಿನಾಂಕ: 13.08.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂ.3/ಸಇಂ.8/ಶಿವಮೊಗ್ಗ/ಟೆಂಡರ್/2009–10/3243

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ 21.10.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/3055.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಬಳ್ಳಿಬೈಲು ಗ್ರಾಮದ ಬಳಿ ನಂದಿಹೊಳೆಗೆ ಅಡ್ಡಲಾಗಿ ಬ್ಯಾರೆಜ್ ನಿರ್ಮಾಣ ಕಾಮಗಾರಿಯ 100.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 29/01/2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಶಿವಮೊಗ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಶಿವಮೊಗ್ಗ ಜಿಲ್ಲಾ ಟೆಂಡರ್ ಬುಲೆಟಿನ್ | 31.01.2009 |
| 2. | ಉದಯವಾಣಿ ದಿನ ಪತ್ರಿಕೆ | 07.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಒಬ್ಬ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 13.07.2009 ರಂದು ತೆರೆಯಲಾಗಿ ಈ ಗುತ್ತಿಗೆದಾರ ಟೆಂಡರು ಅರ್ಹವಾಗಿದ್ದು, ಅವರ ಆರ್ಥಿಕ ಬಿಡ್‌ಗಳನ್ನು 24/07/2009 ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ 97,26,414/– | |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರೀಷ್ಕರಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ 94,82,941/– | |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಡಿ.ಕೆ. ಸಿದ್ದೇಶ್ವರ ಪ್ರಸಾದ್ 1ನೇ ದರ್ಜೆ ಗುತ್ತಿಗೆದಾರರು | 1,12,65,816/– | 15.83 ಹೆಚ್ಚು | 18.80 ಹೆಚ್ಚು |

ಮೇಲ್ಕಂಡಂತೆ ಶ್ರೀ ಡಿ.ಕೆ. ಸಿದ್ದೇಶ್ವರ ಪ್ರಸಾದ್, 1ನೇ ದರ್ಜೆ ಗುತ್ತಿಗೆದಾರರು ಏಕೈಕ ಟೆಂಡರ್‌ದಾರರಾಗಿದ್ದು, ಇವರು ನಮೂದಿಸಿರುವ ಮೊತ್ತ ರೂ.1,12,65,816/–ಗಳಾಗಿದ್ದು ಇವರು ಟೆಂಡರಿನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 18.80ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ

ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 94,82,941/–ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.1,06,92,016/– ಗಳಿಗೆ ಕಾಮಗಾರಿಯನ್ನು ಶ್ರೀ ಡಿ.ಕೆ. ಸಿದ್ದೇಶ್ವರ ಪ್ರಸಾದ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 63 ಅಪಿಬಂ 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು, ಬಳ್ಳಿಬೈಲು ಗ್ರಾಮದ ಬಳಿ ನಂದಿಹೊಳೆಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 94,82,941/–ಗಳ ಮೇಲೆ ಶೇಕಡ 12.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,06,92,016/– ಗಳಿಗೆ (ಒಂದು ಕೋಟಿ ಆರು ಲಕ್ಷದ ತೊಂಬತ್ತೆರಡು ಸಾವಿರದ ಹದಿನಾರು ರೂ.ಗಳು ಮಾತ್ರ) ಶ್ರೀ ಡಿ.ಕೆ.ಸಿದ್ದೇಶ್ವರ ಪ್ರಸಾದ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2550 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬಳ್ಳಾರಿ ಜಿಲ್ಲೆ, ಹೆಚ್.ಬಿ. ಹಳ್ಳಿ ತಾಲ್ಲೂಕು, ಕಿತ್ತನೂರು ಗ್ರಾಮದ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ಹೊಸ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** ದಿನಾಂಕ: 10/09/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–12/2009–10/5302.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ, ಹೆಚ್.ಬಿ. ಹಳ್ಳಿ, ತಾಲ್ಲೂಕು, ಕಿತ್ತನೂರು ಗ್ರಾಮದ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ಹೊಸ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಗೆ ದಿನಾಂಕ:02/03/09 ರಲ್ಲಿ ವಿಶೇಷ ಘಟಕ ಯೋಜನೆಯಡಿ ಮುಖ್ಯ ಇಂಜಿನಿಯರ್ ರವರು ಆಡಳಿತಾತ್ಮಕ ಅನುಮೋದನೆ ನೀಡಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1. | ಜಿಲ್ಲಾ ಟೆಂಡರ್ ಬುಲೆಟಿನ್ | ದಿ:22/06/2009 |
| 2. | ಪ್ರಜಾವಾಣಿ ಹಾಗೂ ವಿಜಯ ಕರ್ನಾಟಕ ದಿನಪತ್ರಿಕೆಗಳು | ದಿ:08/07/2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 12 ಜನ ಗುತ್ತಿಗೆದಾರರು ನಿಗದಿತ ದಿನದಂದು ಕೇವಲ ಇಬ್ಬರು ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಕಾರಣಾಂತರಗಳಿಂದ ನಿಗದಿಪಡಿಸಿದ ವೇಳಾಪಟ್ಟಿಯಂತೆ ದಿನಾಂಕ: 21/07/09ರ ಬದಲಾಗಿ ದಿನಾಂಕ: 24/07/09ರಂದು ತೆರೆಯಲಾಗಿದೆ. ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಬಾಕಿ ಕಾಮಗಾರಿಯನ್ನು ಟೆಂಡರ್ ಕರೆಯುವಾಗ ಚಾಲ್ತಿಯಲ್ಲಿದ್ದ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 25,35,200/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 25,35,200/– |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br><br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಮೆ:ಮದೀನ ಎಲೆಕ್ಟ್ರಿಕಲ್ಸ್,<br>1ನೇ ದರ್ಜೆ ಗುತ್ತಿಗೆದಾರರು | ರೂ.29,88,712/- | 17.88 ಹೆಚ್ಚು | 17.88 ಹೆಚ್ಚು |
| 2 | ವಿ.ದೊಡ್ಡಬಸಪ್ಪ,<br>1ನೇ ದರ್ಜೆ ಗುತ್ತಿಗೆದಾರರು | ರೂ.30,09,457/- | 26.59 ಹೆಚ್ಚು | 26.59 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಮೆ:ಮದೀನ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.29,88,712-00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.88ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 20/10/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 25,35,200-00ಗಳ ಮೇಲೆ ಶೇಕಡ 13.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.28,67,311-00 ಗಳಿಗೆ ಕಾಮಗಾರಿಯನ್ನು ಮೆ:ಮದೀನ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 35 ಏನೀಯೋ 2009, ಬೆಂಗಳೂರು, ದಿನಾಂಕ: 29ನೇ ಅಕ್ಟೋಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ, ಹೆಚ್.ಬಿ.ಹಳ್ಳಿ ತಾಲ್ಲೂಕು, ಕಿತ್ತನೂರು ಗ್ರಾಮದ ಪರಿಶಿಷ್ಟ ಜಾತಿಯ ಫಲಾನುಭವಿಗಳಿಗೆ ಹೊಸ ಏತ ನೀರಾವರಿ ಯೋಜನೆ ಒದಗಿಸುವ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 25,35,200-00 ಗಳ ಮೇಲೆ ಶೇಕಡ 13.10ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 28,67,311-00 ಗಳಿಗೆ (ಇಪ್ಪತ್ತೆಂಟು ಲಕ್ಷದ ಅರವತ್ತೇಳು ಸಾವಿರದ ಮುನ್ನೂರ ಹನ್ನೊಂದು ರೂ.ಗಳು ಮಾತ್ರ) ಮೆ:ಮದೀನ ಎಲೆಕ್ಟ್ರಿಕಲ್ಸ್, 1ನೇ ದರ್ಜೆ ಗುತ್ತಿಗೆದಾರರು, ಬಳ್ಳಾರಿ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2617

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ರಾಮನಗರ ಜಿಲ್ಲೆ, ಬಿಡದಿ ಹೋಬಳಿ, ತಾಳಗುಪ್ಪ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಾಳಗುಪ್ಪ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು. ಇವರ ದಿನಾಂಕ:04/10/2009ರ ಪತ್ರ ಸಂಖ್ಯೆ:ಮುಸನೀ(ದ)/ಲೆಶಾ/ಲೆಸ-1/ 3/ಭೂಸ್ವಾಧೀನ/2009-10/2978.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರದಲ್ಲಿ ರಾಮನಗರ ಜಿಲ್ಲೆ, ಬಿಡದಿ ಹೋಬಳಿ, ತಾಳಗುಪ್ಪ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ತಾಳಗುಪ್ಪ ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳಿಗೆ ರಾಮನಗರದ ಹೆಚ್ಚುವರಿ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 12/11/1987
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 12/09/1990.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಮನಗರದ ಹೆಚ್ಚುವರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳನ್ನು ಸಿವಿಲ್ ನ್ಯಾಯಾಲಯವು ವಜಾಗೊಳಿಸಿದೆ. ಆದ್ದರಿಂದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಎಂಎಫ್‌ಎ 3775/2003ನ್ನು ದಾಖಲಿಸಿರುತ್ತಾರೆ. ಮಾನ್ಯ ಉಚ್ಚ ನ್ಯಾಯಾಲಯವು ಪ್ರತಿ ಎಕರೆಗೆ ರೂ.30,000/–ಗಳಂತೆ ಪರಿಹಾರ ಧನ ನಿಗದಿಪಡಿಸಿ ತೀರ್ಪು ನೀಡಿದೆ. ಈ ಎಂಎಫ್‌ಎ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ:ಲಾ 2152 ಎಲ್‌ಎಸ್‌ಪಿ 2007, ದಿನಾಂಕ 16/11/2007ರಲ್ಲಿ ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರಧನದ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ತಾಳಗುಪ್ಪ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 25/91 | 3775/03 | 62, 69, 75 | 4–23 $^{1}/_{2}$ | 4,78,445–00 |
| | ಒಟ್ಟು | | | | **4,78,445–00** |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 155 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009**

ರಾಮನಗರ ಜಿಲ್ಲೆ, ಬಿಡದಿ ಹೋಬಳಿ ತಾಳಗುಪ್ಪ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ತಾಳಗುಪ್ಪ ಗ್ರಾಮಕ್ಕೆ ಸೇರಿದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.4,78,445–00ಗಳನ್ನು (ನಾಲ್ಕು ಲಕ್ಷದ ಎಪ್ಪತ್ತೆಂಟು ಸಾವಿರದ ನಾನೂರ ನಲವತ್ತೈದು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2624

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಅಫ್‌ಜಲ್‌ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 27/08/08ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ/08–09 4731.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 27/08/08ರ ಪತ್ರದಲ್ಲಿ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು, ಅಫ್‌ಜಲ್‌ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾದ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 11/01/1990
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 30/08/1991

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ದಾಖಲಿಸಿದ್ದ ಗುಲ್ಬರ್ಗಾದ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣ ಸಂಖ್ಯೆ:592/94ರಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ 25/10/2000ರಂದು ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆಗೆ ರೂ.28,500/–ಗಳನ್ನು ನಿಗದಿಪಡಿಸಿ ಶಾಸನಬದ್ಧ ಸವಲತ್ತುಗಳೊಂದಿಗೆ ಪರಿಹಾರ ಧನ ನೀಡುವಂತೆ ಆದೇಶಿಸಿದೆ. ಇದಕ್ಕೆ ತೃಪ್ತರಾಗದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಉಚ್ಚ ನ್ಯಾಯಾಲಯ ದಲ್ಲಿ ಸಲ್ಲಿಸಿದ್ದ ಎಂಎಫ್ಎ ಸಂಖ್ಯೆ:1015/01ರಲ್ಲಿ ಮಾನ್ಯ ನ್ಯಾಯಾಲಯವು ಪ್ರತಿ ಎಕರೆಗೆ ರೂ.50,000/– ಗಳಂತೆ ನಿಗದಿಪಡಿಸಿ ಇತರ ಶಾಸನಬದ್ಧ ಸವಲತ್ತುಗಳೊಂದಿಗೆ ಪಾವತಿಸಲು ದಿನಾಂಕ 18/07/01ರಂದು ತೀರ್ಪು ನೀಡಿದೆ. ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿದೆ.

ನ್ಯಾಯಾಲಯವು ನೀಡಿರುವ ತೀರ್ಪಿನ ಅನುಸಾರ ಪಾವತಿಸಬೇಕಾದ ಪರಿಹಾರ ಧನದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂ. | ಎಂಎಫ್ಎ | ಗ್ರಾಮ | ಸ.ನಂ | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|---|
| 1 | 592/94 | 1015/01 | ಅಫ್‌ಜಲ್‌ಪುರ | 42/2 | 6–11 | 1346237 |
| | ಒಟ್ಟು | | | | | 1346237 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 91 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 17ನೇ ನವೆಂಬರ್ 2009.**

ಗುಲ್ಬರ್ಗಾ ಜಿಲ್ಲೆ, ಅಫ್‌ಜಲ್‌ಪುರ ತಾಲ್ಲೂಕು ಅಫ್‌ಜಲ್‌ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಫ್‌ಜಲ್‌ಪುರ ಗ್ರಾಮದ ಪ್ರಸ್ತಾವನೆಯಲ್ಲಿ ನಮೂದಿಸಿರುವ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.13,46,237–00ಗಳನ್ನು (ಹದಿಮೂರು ಲಕ್ಷದ ನಲವತ್ತಾರು ಸಾವಿರದ ಇನ್ನೂರ ಮೂವತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2627

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

